ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಆಗಸ್ಟ್ ೧೩, ೨೦೧೫ (ಶ್ರಾವಣ ೨೨, ಶಕ ವರ್ಷ ೧೯೩೭)<br>Bengaluru, Thursday, August 13, 2015 (Shravana 22, Shaka Varsha 1937) | ಸಂಚಿಕೆ ೩೩<br>Issue 33 |
|---|---|---|

# ಭಾಗ ೫

# ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಕಲಬುರಗಿ

**ಅಧಿಸೂಚನೆ ಸಂಖ್ಯೆ: DCK/ADMN/11/2015 ಕಲಬುರಗಿ ದಿನಾಂಕ: 27-07-2015**

**ವಿಷಯ:** ವಾಹನ ಚಾಲಕ (Driver) ಹುದ್ದೆಗೆ ನೇಮಕಾತಿ ಬಗ್ಗೆ.

**ಉಲ್ಲೇಖ:** ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: LCA- II/102/2015 ದಿನಾಂಕ : 30.03.2015.

ಮೇಲ್ಕಂಡ ಉಲ್ಲೇಖಗಳ ಅನ್ವಯ ಗೌರವಾನ್ವಿತ ಉಚ್ಚ ನ್ಯಾಯಾಲಯದವರು 01 ವಾಹನ ಚಾಲಕರ ಹುದ್ದೆಗೆ *ON-LINE* ಮೂಲಕ ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಿರುತ್ತಾರೆ.

**ಅರ್ಜಿಗಳನ್ನು ಆನ್‌ಲೈನ್ ಮುಖಾಂತರ ದಿನಾಂಕ: 01-08-2015 ರಿಂದ**

**16-08-2015ರ ವರೆಗೆ ಕಲಬುರಗಿ ಜಿಲ್ಲಾ ನ್ಯಾಯಾಲಯದ ವೆಬ್‌ಸೈಟ್**

**http://ecourts.gov.in/kalaburagi/online-recruitment**

ಮೇಲ್ಕಂಡ ಅಧಿಸೂಚನೆಯ ಅನ್ವಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕಲಬುರಗಿ ಘಟಕದಲ್ಲಿ ಖಾಲಿ ಇರುವ ವಾಹನ ಚಾಲಕರ ಹುದ್ದೆಗೆ ಅರ್ಹ ಹಾಗೂ ಆಸಕ್ತ ಅಭ್ಯರ್ಥಿಗಳಿಂದ ಅರ್ಜಿಗಳನ್ನು *ON-LINE* ಮೂಲಕ ಆಹ್ವಾನಿಸಲಾಗಿದೆ.

ವಾಹನ ಚಾಲಕರು : **Driver**

ಖಾಲಿ ಹುದ್ದೆಗಳು: 01

ವೇತನ ಶ್ರೇಣಿ : 11600 – 200 – 12000 – 250 – 13000 – 300 – 14200 – 350 – 15600 – 400 – 17200 – 450 – 19000 – 500 – 21000 ಮತ್ತು ಇತರೇ ಭತ್ಯೆಗಳು.

ಉಳಿಕೆ ಮೂಲವೃಂದದ ಹುದ್ದೆಗೆ ಸ್ಥಳಿಯೇತರ ಅಭ್ಯರ್ಥಿಗಳಿಗೆ ಗುರುತಿಸಿರುವ ಮೀಸಲಾತಿ
(Residual Parent Cadre) :

| ಮೀಸಲಾತಿ | ಇತರೇ | ಒಟ್ಟು |
|---|---|---|
| ಸಾಮಾನ್ಯ ಅಭ್ಯರ್ಥಿ | 01 | 01 |

**ವಿದ್ಯಾರ್ಹತೆ :** 10ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಮತ್ತು ಭಾರೀ ವಾಹನ ಚಾಲನೆಯ ಪರವಾನಿಗೆ ***(Heavy vehicles driving license)*** ಯನ್ನು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಹೊಂದಿರಬೇಕು.

**ಆಯ್ಕೆ ವಿಧಾನ :**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟ್ರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982 ಮತ್ತು (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

ಅರ್ಹತಾ ಪರೀಕ್ಷೆಯಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳ ಆಧಾರದ ಮೇಲೆ 1 ಹುದ್ದೆಗೆ 25 ಅಭ್ಯರ್ಥಿಗಳಂತೆ (1:25ರ ಅನುಪಾತದಲ್ಲಿ) ಅತಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಪ್ರಕಟಿಸಿರುವ ಹುದ್ದೆಗಳಿಗೆ ಅನುಗುಣವಾಗಿ ಅರ್ಹತಾ ಪರೀಕ್ಷೆ ಮತ್ತು ಸಂದರ್ಶನಕ್ಕೆ ಕರೆಯಲಾಗುವುದು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ :** ಅರ್ಹತಾ ಪರೀಕ್ಷೆಯು 50 ಅಂಕಗಳನ್ನು ಹಾಗೂ ಸಂದರ್ಶನವು 10 ಅಂಕಗಳನ್ನು ಒಳಗೊಂಡಿರುತ್ತದೆ.

**:: ವಯೋಮಿತಿ (ಅರ್ಜಿ ಸಲ್ಲಿಸಲು ಕೊನೆಯ ದಿನಾಂಕಕ್ಕೆ ಅನುಗುಣವಾಗಿ) ::**

ಕನಿಷ್ಠ ವಯೋಮಿತಿ : 18 ವರ್ಷ.

ಗರಿಷ್ಠ ವಯೋಮಿತಿ : ಸಾಮಾನ್ಯ ವರ್ಗ – 35 ವರ್ಷ.

ಸರಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**<u>ಪರಿವೀಕ್ಷಣಾ ಅವಧಿ:</u>**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಹುದ್ದೆಗೆ ಯಾವುದೇ ಇಲಾಖಾ ಪರೀಕ್ಷೆ ನಿಗದಿಪಡಿಸಿದ್ದಲ್ಲಿ ಹಾಗೂ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**<u>ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ:</u>**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಗಳನ್ನು ಸಲ್ಲಿಸುವ ಸಮಯದಲ್ಲಿ ಸಂಬಂಧಪಟ್ಟ ಪ್ರಾಧಿಕಾರದಿಂದ ನಿರಾಕ್ಷೇಪಣ ಪ್ರಮಾಣ ಪತ್ರವನ್ನು ಪಡೆದಿರಬೇಕು.

**<u>ನಿಗದಿತ ಅರ್ಜಿ ಶುಲ್ಕ – ಪಾವತಿಸಬೇಕಾದ ಶುಲ್ಕ ಹಾಗೂ ವಿಧಾನ :</u>**

| | |
|---|---|
| ಸಾಮಾನ್ಯ ವರ್ಗದ ಅಭ್ಯರ್ಥಿಗಳಿಗೆ. | ರೂ. 200/– |

ನಿಗದಿತ ಶುಲ್ಕವನ್ನು ನ್ಯಾಯಾಲಯದ ವೆಬ್‌ಸೈಟ್

http://ecourts.gov.in/kalaburagi/online-recruitment ನಲ್ಲಿ ನೀಡಲಾದ ಲಿಂಕ್ ಮುಖಾಂತರ ಭಾರತೀಯ ಸ್ಟೇಟ್ ಬ್ಯಾಂಕನ ಎಸ್.ಬಿ.ಐ. ಕಲೆಕ್ಟ ಮೂಲಕ **online payment through net banking / credit card / debit card** ಸೌಲಭ್ಯದ ಮೂಲಕ ಅಥವಾ ಚಲನ್ ಮೂಲಕ ಪಾವತಿಸತಕ್ಕದ್ದು. ಚಲನ್ ಪ್ರತಿಯನ್ನು ನ್ಯಾಯಾಲಯದ ವೆಬ್‌ಸೈಟ್‌ನಿಂದ ಪ್ರಿಂಟ್ ಮಾಡಿಕೊಳ್ಳತಕ್ಕದ್ದು. ಇದನ್ನು ಹೊರತುಪಡಿಸಿ ಯಾವುದೇ ಡಿಮಾಂಡ್ ಡ್ರಾಫ್ಟ್ : ಪೋಸ್ಟಲ್ ಆರ್ಡರ್ : ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಶುಲ್ಕ ಪಾವತಿಸದ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಶುಲ್ಕ ಪಾವತಿಸಲು ಬ್ಯಾಂಕ್ ಲಿಂಕ್ ಈ ಕೆಳಗಿನಂತಿದೆ.

https://www.onlinesbi.com/prelogin/icollecthome.htm?corpID=383244

**<u>ಅಭ್ಯರ್ಥಿಗಳು *ON-LINE* ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು :</u>**

1. ಅಭ್ಯರ್ಥಿಗಳು ಅರ್ಜಿಯನ್ನು ON-LINE ಮೂಲಕ ಸಲ್ಲಿಸುವ ಮೊದಲು ಕೊಟ್ಟಿರುವ ಎಲ್ಲಾ ಸೂಚನೆಗಳನ್ನು ಗಮನವಿಟ್ಟು ಓದಿಕೊಳ್ಳಬೇಕು ಮತ್ತು ತಪ್ಪಾಗದಂತೆ ನೋಡಿಕೊಳ್ಳುವುದು, ಒಂದು ವೇಳೆ ಅರ್ಜಿ ಸರಿಯಾಗದಿದ್ದಲ್ಲಿ ತಿರಿಸ್ಕರಿಸಲಾಗುವುದು.
2. ಅಭ್ಯರ್ಥಿಯು ಮೊಬೈಲ್ ಸಂಖ್ಯೆಯನ್ನು ಕಡ್ಡಾಯವಾಗಿ ನಮೂದಿಸುವುದು ಹಾಗೂ ಇ–ಮೇಲ್ ಐಡಿಯನ್ನು ಹೊಂದಿದ್ದಲ್ಲಿ ನಮೂದಿಸುವುದು. ಒಂದು ವೇಳೆ SMS ಅಥವಾ ಇ–ಮೇಲ್ ಮುಖಾಂತರ ತಮಗೆ ಸಂದೇಶ ತಲುಪದಿದ್ದಲ್ಲಿ ಈ ಪ್ರಾಧಿಕಾರ ಹೊಣೆಯಾಗಿರುವುದಿಲ್ಲ.
3. ಅಭ್ಯರ್ಥಿಯ ಭಾವಚಿತ್ರ ಮತ್ತು ಸಹಿಯನ್ನು ಸ್ಕ್ಯಾನ್ ಮಾಡಿ ಅಪ್‌ಲೋಡ ಮಾಡಲು ಈ ಕೆಳಕಂಡ ನಿರ್ದೇಶನಗಳನ್ನು ಪಾಲಿಸತಕ್ಕದ್ದು.
   ಅ) ಬಣ್ಣದ ಭಾವಚಿತ್ರವು ಇತ್ತೀಚಿನದಾಗಿದ್ದು, ಅಳತೆಯಲ್ಲಿ 5cm ಉದ್ದ x 3.6cm ಅಗಲವುಳ್ಳದ್ದಾಗಿರಬೇಕು ಮತ್ತು 50 ಕೆಬಿ ಅಳತೆಯದ್ದಾಗಿರಬೇಕು ಹಾಗೂ ಅದು .jpg ನಮೂನೆಯಲ್ಲಿರಬೇಕು. ಭಾವಚಿತ್ರದ ಹಿಂಬದಿಯು ಬಿಳಿಬಣ್ಣದ್ದಾಗಿರಬೇಕು.
   ಬ) ಭಾವಚಿತ್ರವನ್ನು ಸ್ಕ್ಯಾನ್ ಮಾಡಿ ಅರ್ಜಿಗೆ ಅಪ್‌ಲೋಡ ಮಾಡಬೇಕು (ಯಾವುದೇ ಕಾರಣಕ್ಕೂ ಭಾವಚಿತ್ರದ ಮೇಲೆ ಸಹಿ ಮಾಡಬಾರದು).
   ಕ) ಅಭ್ಯರ್ಥಿಯು ಕಪ್ಪು ಬಾಲ್‌ಪಾಯಿಂಟ್ ಪೆನ್ನಿನಲ್ಲಿ ಬಿಳಿ ಹಾಳೆಯ ಮೇಲೆ ಸಹಿ ಮಾಡಿ (2.5cm ಉದ್ದ x 7.5cm ಅಗಲವುಳ್ಳದ್ದಾಗಿರಬೇಕು ಮತ್ತು 26 ಕೆಬಿ ಅಳತೆಯದ್ದಾಗಿರಬೇಕು ಹಾಗೂ ಅದು .jpg ನಮೂನೆಯಲ್ಲಿರಬೇಕು) ಅಪ್‌ಲೋಡ ಮಾಡಬೇಕು.
4. ತದನಂತರ ಅಭ್ಯರ್ಥಿಯು ON-LINE ಅರ್ಜಿಯಲ್ಲಿ ಕೋರಲಾದ ಎಲ್ಲಾ ಮಾಹಿತಿಗಳನ್ನು ಭರ್ತಿ ಮಾಡಿ ನಿಗದಿತ ಶುಲ್ಕ ಪಾವತಿಸಲು ಅರ್ಜಿಯಲ್ಲಿ ತಿಳಿಸಿರುವಂತೆ ಕ್ರಮ ಕೈಗೊಳ್ಳುವುದು. ತದನಂತರ ಅರ್ಜಿಯನ್ನು ಹಾಗೂ ಶುಲ್ಕವನ್ನು ತುಂಬಿದ ಪ್ರತಿಯನ್ನು download ಮಾಡಿಕೊಂಡು ನೇಮಕಾತಿ ಪ್ರಕ್ರಿಯೆ ಮುಗಿಯುವರೆಗೂ ತಮ್ಮ ಹತ್ತಿರ ಕಾಯ್ದಿರಿಸಕೊಳ್ಳತಕ್ಕದು ಹಾಗೂ ಅರ್ಹತಾ ಪರೀಕ್ಷೆಯ ಸಮಯದಲ್ಲಿ ಹಾಜರು ಪಡಿಸತಕ್ಕದ್ದು.

5. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೇ, ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿ ಹಿಂತಿರುಗಿಸಲಾಗುವುದಿಲ್ಲ.

6. ನ್ಯಾಯಾಲಯದ ಅಧಿಕೃತ ವೆಬ್‌ಸೈಟ್ http://ecourts.gov.in/kalaburagi/online-recruitment **ನಲ್ಲಿ 16-08-2015** ದಿನಾಂಕದವರೆಗೂ ಅರ್ಜಿಗಳನ್ನು ಸಲ್ಲಿಸಬಹುದಾಗಿದೆ.

ಅರ್ಜಿಯನ್ನು ಆನ್‌ಲೈನ್ ಮೂಲಕ ನೋಂದಾಯಿಸಲು : **ಸಲ್ಲಿಸಲು 16-08-2015ರ ರಾತ್ರಿ 11-59ರ ವರೆಗೆ ಅವಕಾಶವಿರುತ್ತದೆ**

ಮತ್ತು

ಶುಲ್ಕವನ್ನು ಚಲನ್ ಮುಖಾಂತರ ಪಾವತಿಸಲು **18-08-2015** ಕಡೆಯ ದಿನಾಂಕವಾಗಿದ್ದು ಅದರೊಳಗೆ ಭಾರತೀಯ ಸ್ಟೇಟ್ ಬ್ಯಾಂಕ್ ಶಾಖೆಯ ವ್ಯವಹಾರದ ವೇಳೆಯಲ್ಲಿ ಪಾವತಿಸತಕ್ಕದ್ದು.

7. ಅರ್ಹ ಅಭ್ಯರ್ಥಿಗಳಿಗೆ SMS ಹಾಗೂ ಇ-ಮೇಲ್ ಮುಖಾಂತರ ಮಾಹಿತಿ ನೀಡಲಾಗುವುದು. ಸಂದರ್ಶನಕ್ಕೆ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ನ್ಯಾಯಾಲಯದ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು ಹಾಗೂ ಅಭ್ಯರ್ಥಿಯು ಸದರೀ ಪಟ್ಟಿಯನ್ನು ಡೌನಲೋಡ್ ಮಾಡಿಕೊಂಡು ಸಂದರ್ಶನಕ್ಕೆ ಹಾಜರಾಗುವಾಗ ತಪ್ಪದೇ ಹಾಜರುಪಡಿಸತಕ್ಕದ್ದು.

8. ಅಭ್ಯರ್ಥಿಗಳು ಈ ಕೆಳಕಂಡ ಪ್ರಮಾಣ ಪತ್ರಗಳನ್ನು ನಿಗಧಿತ ನಮೂನೆಗಳಲ್ಲಿ ON-LINE ಮೂಲಕ ಅರ್ಜಿ ಭರ್ತಿ ಮಾಡಲು ನಿಗದಿ ಪಡಿಸಿದ ಕೊನೆಯ ದಿನಾಂಕದವರೆಗೆ ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಕೋರಿರುವ ಮೀಸಲಾತಿ ಪ್ರಮಾಣ ಪತ್ರಗಳು ಮತ್ತು ಇತರೇ ಪ್ರಮಾಣ ಪತ್ರಗಳನ್ನು ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಅವುಗಳ ಮೂಲ ಪ್ರತಿಗಳನ್ನು ಪರಿಶೀಲನೆಯ ಸಮಯದಲ್ಲಿ ಹಾಜರು ಪಡಿಸಬೇಕು. ಇತರೇ ನಮೂನೆಗಳಲ್ಲಿ ಅಥವಾ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ (ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ ಹೊರತು ಪಡಿಸಿ) ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ, ತಪ್ಪಿದ್ದಲ್ಲಿ ಇವರ ಮೀಸಲಾತಿಯನ್ನು/ಅಭ್ಯರ್ಥಿತ್ವವನ್ನು ಅನರ್ಹಗೊಳಿಸಲಾಗುವುದು.

   ಅ) ಹುದ್ದೆಗೆ ನಿಗದಿಪಡಿಸಿದ ಶುಲ್ಕವನ್ನು ಪಾವತಿಸಿದ ಚಲನ್/ವಿವರದ ಪ್ರತಿ.

   ಆ) ಜನ್ಮ ದಿನಾಂಕದ ದೃಢೀಕರಣಕ್ಕಾಗಿ ಎಸ್.ಎಸ್.ಎಲ್.ಸಿ ಅಂಕಪಟ್ಟಿ/ವರ್ಗಾವಣೆ ಪಟ್ಟಿ/ಕ್ಯುಮುಲೇಟೀವ್ ರೆಕಾರ್ಡ್ ದಾಖಲಾತಿಗಳು.

   ಇ) ಮಾಜಿ ಸೈನಿಕ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಹಾಗೂ ವಯೋಮಿತಿ ರಿಯಾಯಿತಿ ಕೋರಲು ಸೈನಿಕ ಸೇವೆಯಿಂದ ಬಿಡುಗಡೆಯಾದ/ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರವನ್ನು ಹೊಂದಿರತಕ್ಕದ್ದು.

   ಈ) ಅರ್ಜಿಯನ್ನು ಕಳುಹಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗೆ ಇಬ್ಬರು ಗೌರವಾನ್ವಿತ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣ ಪತ್ರ ಹಾಗೂ ಶಾಲಾ ನಡತೆ ಪ್ರಮಾಣ ಪತ್ರಗಳನ್ನು ಸಲ್ಲಿಸುವುದು.

   ಈ) ನಿರಾಕ್ಷೇಪಣಾ ಪತ್ರ (ಸರಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ).

9) ಸರಕಾರದ ಸುತ್ತೋಲೆ ಸಂಖ್ಯೆ: DPAR/78/HKC/2014 ಬೆಂಗಳೂರು ದಿನಾಂಕ: 22-05-2015 ರನ್ವಯ ಹೈದ್ರಾಬಾದ್-ಕರ್ನಾಟಕ ಸ್ಥಳೀಯ ವೃಂದದ ಮೀಸಲಾತಿ ಅಥವಾ ಮಿಕ್ಕುಳಿದ ವೃಂದದಲ್ಲಿ ಲಭ್ಯವಿರುವ ಹುದ್ದೆಗಳಿಗೂ ಅರ್ಜಿ ಸಲ್ಲಿಸುವ ಬಗ್ಗೆ ಅರ್ಜಿಯಲ್ಲಿ ವಿವರವಾಗಿ ತೋರಿಸಿರುವಂತೆ ಆಯ್ಕೆಗಳನ್ನು ಮಾಡಲು ಅಭ್ಯರ್ಥಿಗಳಿಗೆ ಸೂಚಿಸಲಾಗಿದೆ.

10) ಅಂತಿಮವಾಗಿ ಅಭ್ಯರ್ಥಿಯು ನಕಲಿ ಅಭ್ಯರ್ಥಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗೆ ನಡೆಸಲಾದ ಪರಿಶೀಲನೆ ಪ್ರಕ್ರಿಯಗಳ ಸಂದರ್ಭಗಳಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮತಿಕಾತಿಯ ಸಂಬಂಧದಲ್ಲಿ ಯಾವುದೇ ಇತರೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಭಿಸಿರುವನೆಂದು ಕಂಡುಬಂದಲ್ಲಿ ಅವನು/ಅವಳು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೇ, ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಬಿ.ವ್ಹಿ. ಪಾಟೀಲ್**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು
ಕಲಬುರಗಿ.

**P.R. 211**
**S.C. 05**

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಕಲಬುರಗಿ

**ಅಧಿಸೂಚನೆ ಸಂಖ್ಯೆ: DCK/ADMN/12/2015 ಕಲಬುರಗಿ ದಿನಾಂಕ: 27-07-2015**

**ವಿಷಯ: ಆದೇಶ ಜಾರಿಕಾರ** (Process Server) ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖ:** ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: LCA-II/102/2015 ದಿನಾಂಕ : 30.03.2015.

ಮೇಲ್ಕಂಡ ಉಲ್ಲೇಖಗಳ ಅನ್ವಯ ಗೌರವಾನ್ವಿತ ಉಚ್ಚ ನ್ಯಾಯಾಲಯದವರು 26 ಆದೇಶ ಜಾರಿಕಾರರ ಹುದ್ದೆಗಳನು ON-LINE ಮೂಲಕ ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಿರುತ್ತಾರೆ.

**ಅರ್ಜಿಗಳನ್ನು ಆನ್‌ಲೈನ್ ಮುಖಾಂತರ ದಿನಾಂಕಃ 01–08–2015 ರಿಂದ**

**16–08–2015ರ ವರೆಗೆ ಕಲಬುರಗಿ ಜಿಲ್ಲಾ ನ್ಯಾಯಾಲಯದ ವೆಬ್‌ಸೈಟ್**

http://ecourts.gov.in/kalaburagi/online-recruitment

ಮೇಲ್ಕಂಡ ಅಧಿಸೂಚನೆಯ ಅನ್ವಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕಲಬುರಗಿ ಘಟಕದಲ್ಲಿ ಖಾಲಿ ಇರುವ ಆದೇಶ ಜಾರಿಕಾರರ ಹುದ್ದೆಗಳಿಗೆ ಅರ್ಹ ಹಾಗೂ ಆಸಕ್ತ ಅಭ್ಯರ್ಥಿಗಳಿಂದ ಅರ್ಜಿಗಳನ್ನು ON-LINE ಮೂಲಕ ಆಹ್ವಾನಿಸಲಾಗಿದೆ.

**ಸೂಚನೆಃ** ಅಧಿಸೂಚಿಸಲಾದ ಆದೇಶ ಜಾರಿಕಾರರ ಹುದ್ದೆಗಳಿಗೆ ಈ ಮೊದಲೇ ಈ ನ್ಯಾಯಾಲಯದಿಂದ ಹೊರಡಿಸಿದ ಅಧಿಸೂಚನೆ ಸಂಖ್ಯೆಃ DCG/ADMN/03/2010 ದಿನಾಂಕಃ 14.07.2010, ಸಂಖ್ಯೆಃ DCG/ADMN/02/2011 ದಿನಾಂಕಃ 31.03.2011 ಮತ್ತು ಸಂಖ್ಯೆಃ DCG/ADMN/03/2011 ದಿನಾಂಕಃ 10.11.2011 ಗಳನ್ವಯ ಅರ್ಜಿಯನ್ನು ಸಲ್ಲಿಸಿದ್ದಲ್ಲಿ ಅಂತಹ ಅಭ್ಯರ್ಥಿಗಳು ಸಹ **ಮತ್ತೊಮ್ಮೆ ಈ ಅಧಿಸೂಚನೆಗೆ ತಮ್ಮ ಅರ್ಜಿಯನ್ನು ON-LINE ಮೂಲಕ ನೋಂದಾಯಿಸಬೇಕಾಗಿ ಸೂಚಿಸಲಾಗಿದೆ** ಹಾಗೂ ಅಂತಹ ಅಭ್ಯರ್ಥಿಗಳು ಈಗ ವಯೋಮಿತಿಯನ್ನು ಮೀರಿದ್ದಲ್ಲಿ ಮಾತ್ರ ಅವರ ಅಭ್ಯರ್ಥಿತ್ವವನ್ನು ಈ ಹಿಂದಿನ ಅಧಿಸೂಚನೆ ದಿನಾಂಕಗಳಿಗನ್ವಯವಾಗಿ ಪರಿಗಣಿಸಲಾಗುವುದು (ಎಲ್ಲಾ ರೀತಿಯಲ್ಲಿ ಕ್ರಮಬದ್ಧವಾಗಿದ್ದಲ್ಲಿ ಮಾತ್ರ).

**ಆದೇಶ ಜಾರಿಕಾರರು : Process Servers**

ಖಾಲಿ ಹುದ್ದೆಗಳು : 26

ವೇತನ ಶ್ರೇಣಿ : 11000 – 200 – 12000 – 250 – 13000 – 300 – 14200 – 350–
– 15600 – 400 – 17200 – 450 – 19000 ಮತ್ತು ಇತರೇ ಭತ್ಯೆಗಳು.

ಹೈದ್ರಾಬಾದ–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗಾಗಿ ಸ್ಥಳೀಯ ಹುದ್ದೆಗಳಿಗೆ ಗುರುತಿಸಿರುವ ಮೀಸಲಾತಿ
(Hyderabad-Karnataka Local Cadre) :

| ಮೀಸಲಾತಿ | ಇತರೇ | ಮಹಿಳೆಯರು | ಗ್ರಾಮೀಣ | ಕನ್ನಡ ಮಾಧ್ಯಮ | ಯೋಜನೆ ನಿರಾಶ್ರಿತರು | ಅಂಗವಿಕಲರು | ಒಟ್ಟು |
|---|---|---|---|---|---|---|---|
| ಪರಿಶಿಷ್ಟ ಜಾತಿ | –– | 01 | 02 | –– | –– | 01 | 04 |
| ಪರಿಶಿಷ್ಟ ಪಂಗಡ | 01 | –– | –– | –– | –– | –– | 01 |
| ಪ್ರವರ್ಗ–1 | –– | 01 | –– | –– | –– | –– | 01 |
| ಪ್ರವರ್ಗ–2ಎ | –– | 01 | –– | –– | –– | 01 | 02 |
| ಪ್ರವರ್ಗ–2ಬಿ | –– | 01 | –– | –– | –– | –– | 01 |
| ಪ್ರವರ್ಗ–3ಎ | 01 | –– | –– | –– | –– | –– | 01 |
| ಸಾಮಾನ್ಯ ಅಭ್ಯರ್ಥಿ | –– | 04 | 03 | 01 | 01 | 01 | 10 |
| **ಒಟ್ಟು** | **02** | **08** | **05** | **01** | **01** | **03** | **20** |

**ಸೂಚನೆಃ** ಅಂಗವಿಕಲ ಅಭ್ಯರ್ಥಿಗೆ ಮೀಸಲಿರಿಸಿದ ಹುದ್ದೆಗಳು ದೃಷ್ಟಿಮಾಂದ್ಯ ಅಂಗವಿಕಲ ಅಭ್ಯರ್ಥಿಗೆ ಮೀಸಲಿರಿಸಲಾಗಿದೆ.

ಉಳಿಕೆ ಮೂಲವೃಂದದ ಹುದ್ದೆಗಳಿಗೆ ಸ್ಥಳೀಯೇತರ ಅಭ್ಯರ್ಥಿಗಳಿಗೆ ಗುರುತಿಸಿರುವ ಮೀಸಲಾತಿ
(Residual Parent Cadre) :

| ಮೀಸಲಾತಿ | ಇತರೇ | ಗ್ರಾಮೀಣ | ಒಟ್ಟು |
|---|---|---|---|
| ಪರಿಶಿಷ್ಟ ಜಾತಿ | 01 | –– | 01 |
| ಪರಿಶಿಷ್ಟ ಪಂಗಡ | 01 | –– | 01 |
| ಪ್ರವರ್ಗ–2ಎ | 01 | –– | 01 |
| ಪ್ರವರ್ಗ–3ಬಿ | 01 | 01 | 02 |
| ಸಾಮಾನ್ಯ ಅಭ್ಯರ್ಥಿ | 01 | –– | 01 |
| **ಒಟ್ಟು** | **05** | **01** | **06** |

**ವಿದ್ಯಾರ್ಹತೆ** : 10ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು. ವಾಹನ ಚಾಲನಾ ಪರವಾನಿಗೆ (driving license) ಇರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**ಆಯ್ಕೆ ವಿಧಾನ :**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟ್ರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982 ಮತ್ತು (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

ಅರ್ಹತಾ ಪರೀಕ್ಷೆಯಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳ ಆಧಾರದ ಮೇಲೆ 1 ಹುದ್ದೆಗೆ 25 ಅಭ್ಯರ್ಥಿಗಳಂತೆ (1:25ರ ಅನುಪಾತದಲ್ಲಿ) ಅತಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಪ್ರಕಟಿಸಿರುವ ಹುದ್ದೆಗಳಿಗೆ ಅನುಗುಣವಾಗಿ ಸಂದರ್ಶನಕ್ಕೆ ಕರೆಯಲಾಗುವುದು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ :** ಸಂದರ್ಶನವು 10 ಅಂಕಗಳನ್ನು ಒಳಗೊಂಡಿರುತ್ತದೆ.

ಮಹಿಳಾ ಅಭ್ಯರ್ಥಿಗಳು, ಅಂಗವಿಕಲ ಅಭ್ಯರ್ಥಿಗಳು, ಯೋಜನಾ ನಿರಾಶ್ರಿತ ಅಭ್ಯರ್ಥಿಗಳು ಹಾಗೂ ಕನ್ನಡ ಮಾಧ್ಯಮದಲ್ಲಿ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

**:: ವಯೋಮಿತಿ (ಅರ್ಜಿ ಸಲ್ಲಿಸಲು ಕೊನೆಯ ದಿನಾಂಕಕ್ಕೆ ಅನುಗುಣವಾಗಿ) ::**

| | | | | |
|---|---|---|---|---|
| ಕನಿಷ್ಠ ವಯೋಮಿತಿ | : | 18 ವರ್ಷ. | | |
| ಗರಿಷ್ಠ ವಯೋಮಿತಿ | : | ಸಾಮಾನ್ಯ ವರ್ಗ | – | 35 ವರ್ಷ. |
| | | 2ಎ/2ಬಿ/3ಎ/3ಬಿ | – | 38 ವರ್ಷ. |
| | | ಪ.ಜಾ:ಪ.ಪಂ:ಪ್ರ.ವರ್ಗ–I | – | 40 ವರ್ಷ. |

ಸರಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**ಪರಿವೀಕ್ಷಣಾ ಅವಧಿ:**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ:**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಗಳನ್ನು ಸಲ್ಲಿಸುವ ಸಮಯದಲ್ಲಿ ಸಂಬಂಧಪಟ್ಟ ಪ್ರಾಧಿಕಾರದಿಂದ ನಿರಾಕ್ಷೇಪಣ ಪ್ರಮಾಣ ಪತ್ರವನ್ನು ಪಡೆದಿರಬೇಕು.

**ನಿಗದಿತ ಅರ್ಜಿ ಶುಲ್ಕ – ಪಾವತಿಸಬೇಕಾದ ಶುಲ್ಕ ಹಾಗೂ ವಿಧಾನ :**

| | | |
|---|---|---|
| ಸಾಮಾನ್ಯ ವರ್ಗ, ಪ್ರವರ್ಗ–2ಎ, 2ಬಿ, 3ಎ, 3ಬಿ ಗೆ ಸೇರಿದ ಅಭ್ಯರ್ಥಿಗಳಿಗೆ. | – | ರೂ. 200/– |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 ಹಾಗೂ ಅಂಗವಿಕಲ ಅಭ್ಯರ್ಥಿಗಳಿಗೆ | – | ಶುಲ್ಕ ವಿನಾಯಿತಿ ಇರುತ್ತದೆ. |

1) ನಿಗದಿತ ಶುಲ್ಕವನ್ನು ನ್ಯಾಯಾಲಯದ ವೆಬ್‌ಸೈಟ್ http://ecourts.gov.in/kalaburagi/online-recruitment ನಲ್ಲಿ ನೀಡಲಾದ ಲಿಂಕ್ ಮುಖಾಂತರ ಭಾರತೀಯ ಸ್ಟೇಟ್ ಬ್ಯಾಂಕನ ಎಸ್.ಬಿ.ಐ. ಕಲೆಕ್ಟ ಮೂಲಕ online payment through net banking / credit card / debit card ಸೌಲಭ್ಯದ ಮೂಲಕ ಅಥವಾ ಚಲನ್ ಮೂಲಕ ಪಾವತಿಸತಕ್ಕದ್ದು. ಚಲನ್ ಪ್ರತಿಯನ್ನು ನ್ಯಾಯಾಲಯದ ವೆಬ್‌ಸೈಟ್‌ನಿಂದ ಪ್ರಿಂಟ್ ಮಾಡಿಕೊಳ್ಳತಕ್ಕದ್ದು. ಇದನ್ನು ಹೊರತುಪಡಿಸಿ ಯಾವುದೇ ಡಿಮಾಂಡ್ ಡ್ರಾಫ್ಟ : ಪೋಸ್ಟಲ್ ಆರ್ಡರ್ : ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಶುಲ್ಕ ಪಾವತಿಸದ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಶುಲ್ಕ ಪಾವತಿಸಲು ಬ್ಯಾಂಕ ಲಿಂಕ್ ಈ ಕೆಳಗಿನಂತಿದೆ.

   https://www.onlinesbi.com/prelogin/icollecthome.htm?corpID=383244

2) ಈ ಹಿಂದೆ ಈ ನ್ಯಾಯಾಲಯದಿಂದ ಆದೇಶ ಜಾರಿಕಾರರ ಹುದ್ದೆಗೆ ಹೊರಡಿಸಲಾದ ಅಧಿಸೂಚನೆಗಳಿಗೆ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳು ಮತ್ತೊಮ್ಮೆ ಸಂಪೂರ್ಣ ಮಾಹಿತಿಯೊಂದಿಗೆ ON-LINE ಮುಖಾಂತರ ಅರ್ಜಿಯನ್ನು ನಿಗದಿತ ಶುಲ್ಕ ಪಾವತಿ ಮಾಡಿ ಸಲ್ಲಿಸಬೇಕು ಹಾಗೂ ಈ ಹಿಂದೆ ಸಲ್ಲಿಸಲಾಗಿದ್ದ ಅರ್ಜಿ ಕ್ರಮಬದ್ಧವಾಗಿದ್ದಲ್ಲಿ ಮಾತ್ರ ಅವರ ಅರ್ಜಿಯನ್ನು ವಯೋಮಿತಿ ಪರಿಗಣನೆಗೆ ಅಳವಡಿಸಲಾಗುವುದು.

**ಅಭ್ಯರ್ಥಿಗಳು ON-LINE ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು :**

1. ಅಭ್ಯರ್ಥಿಗಳು ಅರ್ಜಿಯನ್ನು ON-LINE ಮೂಲಕ ಸಲ್ಲಿಸುವ ಮೊದಲು ಕೊಟ್ಟಿರುವ ಎಲ್ಲಾ ಸೂಚನೆಗಳನ್ನು ಗಮನವಿಟ್ಟು ಓದಿಕೊಳ್ಳಬೇಕು ಮತ್ತು ತಪ್ಪಾಗದಂತೆ ನೋಡಿಕೊಳ್ಳುವುದು, ಒಂದು ವೇಳೆ ಅರ್ಜಿ ಸರಿಯಾಗದಿದ್ದಲ್ಲಿ ತಿರಿಸ್ಕರಿಸಲಾಗುವುದು.
2. ಅಭ್ಯರ್ಥಿಯು ಮೊಬೈಲ್ ಸಂಖ್ಯೆಯನ್ನು ಕಡ್ಡಾಯವಾಗಿ ನಮೂದಿಸುವುದು ಹಾಗೂ ಇ–ಮೇಲ್ ಐಡಿಯನ್ನು ಹೊಂದಿದ್ದಲ್ಲಿ ನಮೂದಿಸುವುದು. ಒಂದು ವೇಳೆ SMS ಅಥವಾ ಇ–ಮೇಲ್ ಮುಖಾಂತರ ತಮಗೆ ಸಂದೇಶ ತಲುಪದಿದ್ದಲ್ಲಿ ಈ ಪ್ರಾಧಿಕಾರ ಹೊಣೆಯಾಗಿರುವುದಿಲ್ಲ.
3. ಅಭ್ಯರ್ಥಿಯ ಭಾವಚಿತ್ರ ಮತ್ತು ಸಹಿಯನ್ನು ಸ್ಕ್ಯಾನ್ ಮಾಡಿ ಅಪ್‌ಲೋಡ ಮಾಡಲು ಈ ಕೆಳಕಂಡ ನಿರ್ದೇಶನಗಳನ್ನು ಪಾಲಿಸತಕ್ಕದ್ದು.
   ಅ) ಬಣ್ಣದ ಭಾವಚಿತ್ರವು ಇತ್ತೀಚಿನದಾಗಿದ್ದು, ಅಳತೆಯಲ್ಲಿ 5cm ಉದ್ದ x 3.6cm ಅಗಲವುಳ್ಳದ್ದಾಗಿರಬೇಕು ಮತ್ತು 50 ಕೆಬಿ ಅಳತೆಯದ್ದಾಗಿರಬೇಕು ಹಾಗೂ ಅದು .jpg ನಮೂನೆಯಲ್ಲಿರಬೇಕು. ಭಾವಚಿತ್ರದ ಹಿಂಬದಿಯು ಬಿಳಿಬಣ್ಣದ್ದಾಗಿರಬೇಕು.

   ಬ) ಭಾವಚಿತ್ರವನ್ನು ಸ್ಕ್ಯಾನ್ ಮಾಡಿ ಅರ್ಜಿಗೆ ಅಪ್‌ಲೋಡ ಮಾಡಬೇಕು (ಯಾವುದೇ ಕಾರಣಕ್ಕೂ ಭಾವಚಿತ್ರದ ಮೇಲೆ ಸಹಿ ಮಾಡಬಾರದು).

   ಕ) ಅಭ್ಯರ್ಥಿಯು ಕಪ್ಪು ಬಾಲ್‌ಪಾಯಿಂಟ್ ಪೆನ್ನಿನಲ್ಲಿ ಬಿಳಿ ಹಾಳೆಯ ಮೇಲೆ ಸಹಿ ಮಾಡಿ (2.5cm ಉದ್ದ x 7.5cm ಅಗಲವುಳ್ಳದ್ದಾಗಿರಬೇಕು ಮತ್ತು 26 ಕೆಬಿ ಅಳತೆಯದ್ದಾಗಿರಬೇಕು ಹಾಗೂ ಅದು .jpg ನಮೂನೆಯಲ್ಲಿರಬೇಕು) ಅಪ್‌ಲೋಡ ಮಾಡಬೇಕು.

4. ತದನಂತರ ಅಭ್ಯರ್ಥಿಯು ON-LINE ಅರ್ಜಿಯಲ್ಲಿ ಕೋರಲಾದ ಎಲ್ಲಾ ಮಾಹಿತಿಗಳನ್ನು ಭರ್ತಿ ಮಾಡಿ ನಿಗದಿತ ಶುಲ್ಕ ಪಾವತಿಸಲು ಅರ್ಜಿಯಲ್ಲಿ ತಿಳಿಸಿರುವಂತೆ ಕ್ರಮ ಕೈಗೊಳ್ಳುವುದು. ತದನಂತರ ಅರ್ಜಿಯನ್ನು ಹಾಗೂ ಶುಲ್ಕವನ್ನು ತುಂಬಿದ ಪ್ರತಿಯನ್ನು download ಮಾಡಿಕೊಂಡು ನೇಮಕಾತಿ ಪ್ರಕ್ರಿಯೆ ಮುಗಿಯುವರೆಗೂ ತಮ್ಮ ಹತ್ತಿರ ಕಾಯ್ದಿರಿಸಕೊಳ್ಳತಕ್ಕದು ಹಾಗೂ ಅರ್ಹತಾ ಪರೀಕ್ಷೆಯ ಸಮಯದಲ್ಲಿ ಹಾಜರು ಪಡಿಸತಕ್ಕದ್ದು.

5. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೇ, ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿ ಹಿಂತಿರುಗಿಸಲಾಗುವುದಿಲ್ಲ.

6. ನ್ಯಾಯಾಲಯದ ಅಧಿಕೃತ ವೆಬ್‌ಸೈಟ್ http://ecourts.gov.in/kalaburagi/online-recruitment ನಲ್ಲಿ **16–08–2015** ದಿನಾಂಕದವರೆಗೂ ಅರ್ಜಿಗಳನ್ನು ಸಲ್ಲಿಸಬಹುದಾಗಿದೆ.

ಅರ್ಜಿಯನ್ನು ಆನ್‌ಲೈನ್ ಮೂಲಕ ನೋಂದಾಯಿಸಲು ಃ ಸಲ್ಲಿಸಲು **16–08–2015ರ ರಾತ್ರಿ 11–59ರ ವರೆಗೆ** ಅವಕಾಶವಿರುತ್ತದೆ

ಮತ್ತು

ಶುಲ್ಕವನ್ನು ಚಲನ್ ಮುಖಾಂತರ ಪಾವತಿಸಲು **18–08–2015** ಕಡೆಯ ದಿನಾಂಕವಾಗಿದ್ದು ಅದರೊಳಗೆ ಭಾರತೀಯ ಸ್ಟೇಟ್ ಬ್ಯಾಂಕ್ ಶಾಖೆಯ ವ್ಯವಹಾರದ ವೇಳೆಯಲ್ಲಿ ಪಾವತಿಸತಕ್ಕದ್ದು.

7. ಅರ್ಹ ಅಭ್ಯರ್ಥಿಗಳಿಗೆ SMS ಹಾಗೂ ಇ-ಮೇಲ್ ಮುಖಾಂತರ ಮಾಹಿತಿ ನೀಡಲಾಗುವುದು. ಸಂದರ್ಶನಕ್ಕೆ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ನ್ಯಾಯಾಲಯದ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು ಹಾಗೂ ಅಭ್ಯರ್ಥಿಯು ಸದರೀ ಪಟ್ಟಿಯನ್ನು ಡೌನಲೋಡ್ ಮಾಡಿಕೊಂಡು ಸಂದರ್ಶನಕ್ಕೆ ಹಾಜರಾಗುವಾಗ ತಪ್ಪದೇ ಹಾಜರುಪಡಿಸತಕ್ಕದ್ದು.

8. ಅಭ್ಯರ್ಥಿಗಳು ಈ ಕೆಳಕಂಡ ಪ್ರಮಾಣ ಪತ್ರಗಳನ್ನು ನಿಗದಿತ ನಮೂನೆಗಳಲ್ಲಿ ON-LINE ಮೂಲಕ ಅರ್ಜಿ ಭರ್ತಿ ಮಾಡಲು ನಿಗದಿ ಪಡಿಸಿದ ಕೊನೆಯ ದಿನಾಂಕದವರೆಗೆ ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಕೋರಿರುವ ಮೀಸಲಾತಿ ಪ್ರಮಾಣ ಪತ್ರಗಳು ಮತ್ತು ಇತರೇ ಪ್ರಮಾಣ ಪತ್ರಗಳನ್ನು ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಅವುಗಳ ಮೂಲ ಪ್ರತಿಗಳನ್ನು ಪರಿಶೀಲನೆಯ ಸಮಯದಲ್ಲಿ ಹಾಜರು ಪಡಿಸಬೇಕು. ಇತರೇ ನಮೂನೆಗಳಲ್ಲಿ ಅಥವಾ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ (ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ ಹೊರತು ಪಡಿಸಿ) ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ, ತಪ್ಪಿದ್ದಲ್ಲಿ ಇವರ ಮೀಸಲಾತಿಯನ್ನು/ಅಭ್ಯರ್ಥಿತ್ವವನ್ನು ಅನರ್ಹಗೊಳಿಸಲಾಗುವುದು.

ಅ) ಹುದ್ದೆಗೆ ನಿಗದಿಪಡಿಸಿದ ಶುಲ್ಕವನ್ನು ಪಾವತಿಸಿದ ಚಲನ್/ವಿವರದ ಪ್ರತಿ.

ಆ) ಜನ್ಮ ದಿನಾಂಕದ ದೃಢೀಕರಣಕ್ಕಾಗಿ ಎಸ್.ಎಸ್.ಎಲ್.ಸಿ ಅಂಕಪಟ್ಟಿ/ವರ್ಗಾವಣೆ ಪಟ್ಟಿ/ಕ್ಯುಮುಲೇಟೀವ್ ರೆಕಾರ್ಡ್ ದಾಖಲಾತಿಗಳು.

ಇ) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ–ಡಿ ಯಲ್ಲಿ ಪ್ರವರ್ಗ–Iರ ಅಭ್ಯರ್ಥಿಗಳು ನಮೂನೆ–ಇ ಯಲ್ಲಿ ಮತ್ತು 2ಎ, 2ಬಿ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ–ಎಫ್ ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದಿರತಕ್ಕದ್ದು.

ಈ) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದಿರತಕ್ಕದ್ದು.

ಉ) ಕನ್ನಡ ಮಾಧ್ಯಮ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಹಾಗೂ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಪಡೆದಿರತಕ್ಕದ್ದು.

ಊ) ಯೋಜನಾ ನಿರಾಶ್ರಿತ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿಪಡಿಸಿದ ನಮೂನೆಯಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದಿರತಕ್ಕದ್ದು.

ಎ) ಮಾಜಿ ಸೈನಿಕ ಅಭ್ಯರ್ಥಿಗಳು ಇತರೇ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಹಾಗೂ ವಯೋಮಿತಿ ರಿಯಾಯಿತಿ ಕೋರಲು ಸೈನಿಕ ಸೇವೆಯಿಂದ ಬಿಡುಗಡೆಯಾದ/ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರವನ್ನು ಹೊಂದಿರತಕ್ಕದ್ದು.

ಏ) ವಿಧವೆಯರು, ಜೀತ ಕಾರ್ಮಿಕರು ವಯೋಮಿತಿ ರಿಯಾಯ್ತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರವನ್ನು ಪಡೆದಿರತಕ್ಕದ್ದು.

ಐ) ಅಂಗವಿಕಲ ಮೀಸಲಾತಿ ಪ್ರಮೂಣ ಪತ್ರ (ವಯೋಮಿತಿ ಸಡಿಲಿಕೆಗಾಗಿ ಮೀಸಲಾತಿ ಕೋರಿದ್ದಲ್ಲಿ).

ಒ) ಹೈದ್ರಾಬಾದ – ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳಿಗಾಗಿ ಅರ್ಜಿ ಸಲ್ಲಿಸುವವರು ಸರಕಾರದ ಅಧಿಸೂಚನೆ ಸಂಖ್ಯೆಃ DPAR/43/HKC/2013 ಬೆಂಗಳೂರು ದಿನಾಂಕಃ 29–01–2014ರಲ್ಲಿ ನಿಗದಿಪಡಿಸಲಾದ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು–2013ರ ನಿಯಮ 3(3)ರಲ್ಲಿ ಗೊತ್ತುಪಡಿಸಿರುವಂತೆ "ಅನುಬಂಧ–ಎ" ಯಲ್ಲಿರುವಂತೆ "ಅರ್ಹತಾ ಪ್ರಮಾಣ ಪತ್ರ" ವನ್ನು ಸಂಬಂಧಪಟ್ಟ ಸಹಾಯಕ ಆಯುಕ್ತರವರಿಂದ ಹಾಗೂ ಸೇವಾನಿರತ ಅಭ್ಯರ್ಥಿಗಳು ಸ್ವಗ್ರಾಮ ಪ್ರಮಾಣವನ್ನು ಸಂಬಂಧಪಟ್ಟ ನೇಮಕಾತಿ ಪ್ರಾಧಿಕಾರದಿಂದ ಅಧಿಸೂಚನೆಯ ಕೊನೆಯ ದಿನಾಂಕದ ಒಳಗಾಗಿ ಪಡೆದಿರಬೇಕು.

ಓ) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗೆ ಇಬ್ಬರು ಗೌರವಾನ್ವಿತ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣ ಪತ್ರ ಹಾಗೂ ಶಾಲಾ ನಡತೆ ಪ್ರಮಾಣ ಪತ್ರಗಳನ್ನು ಪಡೆದಿರತಕ್ಕದ್ದು.

ಔ) ನಿರಾಕ್ಷೇಪಣಾ ಪತ್ರ (ಸರಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ).

9) ಸರಕಾರದ ಸುತ್ತೋಲೆ ಸಂಖ್ಯೆಃ DPAR/78/HKC/2014 ಬೆಂಗಳೂರು ದಿನಾಂಕಃ 22-05-2015 ರನ್ವಯ ಹೈದ್ರಾಬಾದ್-ಕರ್ನಾಟಕ ಸ್ಥಳೀಯ ವೃಂದದ ಮೀಸಲಾತಿ ಅಥವಾ ಮಿಕ್ಕುಳಿದ ವೃಂದದಲ್ಲಿ ಲಭ್ಯವಿರುವ ಹುದ್ದೆಗಳಿಗೂ ಅರ್ಜಿ ಸಲ್ಲಿಸುವ ಬಗ್ಗೆ ಅರ್ಜಿಯಲ್ಲಿ ವಿವರವಾಗಿ ತೋರಿಸಿರುವಂತೆ ಆಯ್ಕೆಗಳನ್ನು ಮಾಡಲು ಅಭ್ಯರ್ಥಿಗಳಿಗೆ ಸೂಚಿಸಲಾಗಿದೆ.

10) ಅಂತಿಮವಾಗಿ ಅಭ್ಯರ್ಥಿಯು ನಕಲಿ ಅಭ್ಯರ್ಥಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗೆ ನಡೆಸಲಾದ ಪರಿಶೀಲನೆ ಪ್ರಕ್ರಿಯಗಳ ಸಂದರ್ಭಗಳಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೇ ಆಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಭಿಸಿರುವನೆಂದು ಕಂಡುಬಂದಲ್ಲಿ ಅವನು/ಅವಳು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೇ, ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಬಿ.ವ್ಹಿ. ಪಾಟೀಲ್**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು
ಕಲಬುರಗಿ.

**P.R. 210**
**S.C. 05**

## ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಕಲಬುರಗಿ

**ಅಧಿಸೂಚನೆ ಸಂಖ್ಯೆಃ DCK/ADMN/10/2015 ಕಲಬುರಗಿ ದಿನಾಂಕಃ 27-07-2015**

**ವಿಷಯಃ ಬೆರಳಚ್ಚು-ನಕಲುಗಾರರ** ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖಃ** ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆಃ LCA- II/102/2015 ದಿನಾಂಕ : 30.03.2015.

ಮೇಲ್ಕಂಡ ಉಲ್ಲೇಖಗಳ ಅನ್ವಯ ಗೌರವಾನ್ವಿತ ಉಚ್ಚ ನ್ಯಾಯಾಲಯದವರು 18 ಬೆರಳಚ್ಚು -ನಕಲುಗಾರರ ಹುದ್ದೆಗಳನ್ನು *ON-LINE* ಮೂಲಕ ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಿರುತ್ತಾರೆ.

**ಅರ್ಜಿಗಳನ್ನು ಆನ್‌ಲೈನ್ ಮುಖಾಂತರ ದಿನಾಂಕಃ 01-08-2015 ರಿಂದ**

**16-08-2015ರ ವರೆಗೆ ಕಲಬುರಗಿ ಜಿಲ್ಲಾ ನ್ಯಾಯಾಲಯದ ವೆಬ್‌ಸೈಟ್**

http://ecourts.gov.in/kalaburagi/online-recruitment

ಶುಲ್ಕವನ್ನು ಚಲನ್ ಮುಖಾಂತರ ಭಾರತೀಯ ಸ್ಟೇಟ್ ಬ್ಯಾಂಕ ಶಾಖೆಯಲ್ಲಿ ಪಾವತಿಸಲು **ದಿನಾಂಕಃ 18-08-2015** ಕೊನೆಯ ದಿನಾಂಕವಾಗಿರುತ್ತದೆ.

ಮೇಲ್ಕಂಡ ಅಧಿಸೂಚನೆಯ ಅನ್ವಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕಲಬುರಗಿ ಘಟಕದಲ್ಲಿ ಖಾಲಿ ಇರುವ ಬೆರಳಚ್ಚು-ನಕಲುಗಾರರ ಹುದ್ದೆಗಳಿಗೆ ಅರ್ಹ ಹಾಗೂ ಅಸಕ್ತ ಅಭ್ಯರ್ಥಿಗಳಿಂದ ಅರ್ಜಿಗಳನ್ನು *ON-LINE* ಮೂಲಕ ಆಹ್ವಾನಿಸಲಾಗಿದೆ.

**ಸೂಚನೆಃ** ಅಧಿಸೂಚಿಸಲಾದ ಬೆರಳಚ್ಚು-ನಕಲುಗಾರರ ಹುದ್ದೆಗಳಿಗೆ ಈ ಮೊದಲೇ ಈ ನ್ಯಾಯಾಲಯದಿಂದ ಹೊರಡಿಸಿದ ಅಧಿಸೂಚನೆ ಸಂಖ್ಯೆಃ DCG/ADMN/03/2010 ದಿನಾಂಕಃ 14.07.2010, ಸಂಖ್ಯೆಃ DCG/ADMN/03/2011 ದಿನಾಂಕಃ 10.11.2011 ಮತ್ತು ಸಂಖ್ಯೆಃ DCG/ADMN/01/2012 ದಿನಾಂಕಃ 05.10.2012ಗಳನ್ವಯ ಅರ್ಜಿಯನ್ನು ಸಲ್ಲಿಸಿದ್ದಲ್ಲಿ ಅಂತಹ ಅಭ್ಯರ್ಥಿಗಳು ಸಹ *ಮತ್ತೊಮ್ಮೆ ಈ ಅಧಿಸೂಚನೆಗೆ ತಮ್ಮ ಅರ್ಜಿಯನ್ನು ON-LINE ಮೂಲಕ ನೋಂದಾಯಿಸಬೇಕಾಗಿ ಸೂಚಿಸಲಾಗಿದೆ* ಹಾಗೂ ಅಂತಹ ಅಭ್ಯರ್ಥಿಗಳು ಈಗ ವಯೋಮಿತಿಯನ್ನು ಮೀರಿದ್ದಲ್ಲಿ ಮಾತ್ರ ಅವರ ಅಭ್ಯರ್ಥಿತ್ವವನ್ನು ಈ ಹಿಂದಿನ ಅಧಿಸೂಚನೆ ದಿನಾಂಕಗಳಿಗನ್ವಯವಾಗಿ ಪರಿಗಣಿಸಲಾಗುವುದು (ಎಲ್ಲಾ ರೀತಿಯಲ್ಲಿ ಕ್ರಮಬದ್ಧವಾಗಿದ್ದಲ್ಲಿ ಮಾತ್ರ).

**ಬೆರಳಚ್ಚು-ನಕಲುಗಾರರು : Typist-Copyist**

ಖಾಲಿ ಹುದ್ದೆಗಳುಃ 18

ವೇತನ ಶ್ರೇಣಿ : 11600 - 200 - 12000 - 250 - 13000 - 300 - 14200 - 350-
- 15600 - 400 - 17200 - 450 - 19000 - 500 - 21000 ಮತ್ತು ಇತರೇ ಭತ್ಯೆಗಳು.

**ಹೈದ್ರಾಬಾದ-ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗಾಗಿ ಸ್ಥಳೀಯ ಹುದ್ದೆಗಳಿಗೆ ಗುರುತಿಸಿರುವ ಮೀಸಲಾತಿ**
**(Hyderabad-Karnataka Local Cadre) :**

| ಮೀಸಲಾತಿ | ಇತರೇ | ಮಹಿಳೆಯರು | ಗ್ರಾಮೀಣ | ಅಂಗವಿಕಲರು | ಒಟ್ಟು |
|---|---|---|---|---|---|
| ಪರಿಶಿಷ್ಟ ಜಾತಿ | 01 | 01 | -- | -- | 02 |
| ಪರಿಶಿಷ್ಟ ಪಂಗಡ | 01 | -- | -- | -- | 01 |

| ಮೀಸಲಾತಿ | ಇತರೇ | ಮಹಿಳೆಯರು | ಗ್ರಾಮೀಣ | ಅಂಗವಿಕಲರು | ಒಟ್ಟು |
|---|---|---|---|---|---|
| ಪ್ರವರ್ಗ–1 | 01 | –– | –– | –– | 01 |
| ಪ್ರವರ್ಗ–2ಎ | 01 | –– | –– | –– | 01 |
| ಪ್ರವರ್ಗ–2ಬಿ | 01 | –– | –– | –– | 01 |
| ಪ್ರವರ್ಗ–3ಎ | 01 | –– | –– | –– | 01 |
| ಪ್ರವರ್ಗ–3ಬಿ | 01 | –– | –– | –– | 01 |
| ಸಾಮಾನ್ಯ ಅಭ್ಯರ್ಥಿ | 02 | 02 | 03 | 01 | 08 |
| **ಒಟ್ಟು** | **09** | **03** | **03** | **01** | **16** |

**ಸೂಚನೆಃ** ಒಂದು ಸಾಮಾನ್ಯ ಅಭ್ಯರ್ಥಿ ಹುದ್ದೆಯನ್ನು ದೃಷ್ಟಿಮಾಂಧ್ಯ ಅಂಗವಿಕಲ ಅಭ್ಯರ್ಥಿಗೆ ಮೀಸಲಿರಿಸಲಾಗಿದೆ.

ಉಳಿಕೆ ಮೂಲವೃಂದದ ಹುದ್ದೆಗಳಿಗೆ ಸ್ಥಳಿಯೇತರ ಅಭ್ಯರ್ಥಿಗಳಿಗೆ ಗುರುತಿಸಿರುವ ಮೀಸಲಾತಿ (Residual Parent Cadre) :

| ಮೀಸಲಾತಿ | ಮಹಿಳೆಯರು | ಒಟ್ಟು |
|---|---|---|
| ಪ್ರವರ್ಗ–2ಎ | 01 | 01 |
| ಸಾಮಾನ್ಯ ಅಭ್ಯರ್ಥಿ | 01 | 01 |
| **ಒಟ್ಟು** | **02** | **02** |

**ವಿದ್ಯಾರ್ಹತೆ :** 10ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಮತ್ತು ಇಂಗ್ಲೀಷ ಎರಡೂ ಭಾಷೆಯಲ್ಲಿಯೂ ಕಿರಿಯ ಶ್ರೇಣಿ ಬೆರಳಚ್ಚು ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆ ವಿಧಾನ :**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟ್ರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982 ಮತ್ತು (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು 15 ನಿಮಿಷಗಳ ಉಕ್ತಲೇಖನದಲ್ಲಿ ಕೊಡುವ ವಿಷಯವನ್ನು ಕಂಪ್ಯೂಟರ್‌ನಲ್ಲಿ ಬೆರಳಚ್ಚು ಮಾಡುವ ಸಾಮರ್ಥ್ಯ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ :** ಸಾಮರ್ಥ್ಯ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳು ಪಡೆಯಬೇಕು ಮತ್ತು ಸಂದರ್ಶನವು 5 ಅಂಕಗಳನ್ನೊಳಗೊಂಡಿರುತ್ತದೆ. ಕಂಪ್ಯೂಟರ್‌ನಲ್ಲಿ ಬೆರಳಚ್ಚು ಮಾಡುವ ಜ್ಞಾನವು ಅವಶ್ಯವಾಗಿರುತ್ತದೆ.

ಮಹಿಳಾ ಅಭ್ಯರ್ಥಿಗಳು, ಮಾಜಿ ಸೈನಿಕ ಅಭ್ಯರ್ಥಿಗಳು, ಅಂಗವಿಕಲ ಅಭ್ಯರ್ಥಿಗಳು ಯೋಜನಾ ನಿರಾಶ್ರಿತ ಅಭ್ಯರ್ಥಿಗಳು ಹಾಗೂ ಕನ್ನಡ ಮಾಧ್ಯಮದಲ್ಲಿ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

**ಕಂಪ್ಯೂಟರ ಸಾಕ್ಷರತಾ ಪರೀಕ್ಷೆಃ**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸರಕಾರದ ಅಧಿಸೂಚನೆ ಸಂಖ್ಯೆಃ DPAR/43/SCR/2008 ಬೆಂಗಳೂರು ದಿನಾಂಕಃ 07–03–2012ರಂತೆ ನಿಗದಿಪಡಿಸುವ ಕಂಪ್ಯೂಟರ ಸಾಕ್ಷರತಾ ಪರೀಕ್ಷೆಯನ್ನು ಆಯ್ಕೆಯಾದ ಮೂರು ತಿಂಗಳೊಳಗಾಗಿ ಶೇಕಡಾ 60 ರಂತೆ ಅಂಕಗಳನ್ನು ಪಡೆದು ಉತ್ತೀರ್ಣವಾಗತಕ್ಕದ್ದು ಇಲ್ಲವಾದಲ್ಲಿ ಅವರ ಆಯ್ಕೆಯನ್ನು ರದ್ದುಪಡಿಸಲಾಗುವುದು.

**ಃಃ ವಯೋಮಿತಿ (ಅರ್ಜಿ ಸಲ್ಲಿಸಲು ಕೊನೆಯ ದಿನಾಂಕಕ್ಕೆ ಅನುಗುಣವಾಗಿ) ಃಃ**

| | | | | |
|---|---|---|---|---|
| ಕನಿಷ್ಠ ವಯೋಮಿತಿ | ಃ | 18 ವರ್ಷ. | | |
| ಗರಿಷ್ಠ ವಯೋಮಿತಿ | ಃ | ಸಾಮಾನ್ಯ ವರ್ಗ | – | 35 ವರ್ಷ. |
| | | 2ಎ/2ಬಿ/3ಎ/3ಬಿ | – | 38 ವರ್ಷ. |
| | | ಪ.ಜಾಃಪ.ಪಂಃಪ್ರ.ವರ್ಗ–I | – | 40 ವರ್ಷ. |

ಸರಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**<u>ಪರಿವೀಕ್ಷಣಾ ಅವಧಿಃ</u>**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ:**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಗಳನ್ನು ಸಲ್ಲಿಸುವ ಸಮಯದಲ್ಲಿ ಸಂಬಂಧಪಟ್ಟ ಪ್ರಾಧಿಕಾರದಿಂದ ನಿರಾಕ್ಷೇಪಣ ಪ್ರಮಾಣ ಪತ್ರವನ್ನು ಪಡೆದಿರಬೇಕು.

**ನಿಗದಿತ ಅರ್ಜಿ ಶುಲ್ಕ – ಪಾವತಿಸಬೇಕಾದ ಶುಲ್ಕ ಹಾಗೂ ವಿಧಾನ :**

| | |
|---|---|
| ಸಾಮಾನ್ಯ ವರ್ಗ, ಪ್ರವರ್ಗ–2ಎ, 2ಬಿ, 3ಎ, 3ಬಿ ಗೆ ಸೇರಿದ ಅಭ್ಯರ್ಥಿಗಳಿಗೆ. | ರೂ. 200/– |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 ಹಾಗೂ ಅಂಗವಿಕಲ ಅಭ್ಯರ್ಥಿಗಳಿಗೆ | ಶುಲ್ಕ ವಿನಾಯಿತಿ ಇರುತ್ತದೆ. |

1) ನಿಗದಿತ ಶುಲ್ಕವನ್ನು ನ್ಯಾಯಾಲಯದ ವೆಬ್‌ಸೈಟ್ http://ecourts.gov.in/kalaburagi/online-recruitment ನಲ್ಲಿ ನೀಡಲಾದ ಲಿಂಕ್ ಮುಖಾಂತರ ಭಾರತೀಯ ಸ್ಟೇಟ್ ಬ್ಯಾಂಕನ ಎಸ್.ಬಿ.ಐ. ಕಲೆಕ್ಟ ಮೂಲಕ online payment through net banking / credit card / debit card ಸೌಲಭ್ಯದ ಮೂಲಕ ಅಥವಾ ಚಲನ್ ಮೂಲಕ ಪಾವತಿಸತಕ್ಕದ್ದು. ಚಲನ್ ಪ್ರತಿಯನ್ನು ನ್ಯಾಯಾಲಯದ ವೆಬ್‌ಸೈಟ್‌ನಿಂದ ಪ್ರಿಂಟ್ ಮಾಡಿಕೊಳ್ಳತಕ್ಕದ್ದು. ಇದನ್ನು ಹೊರತುಪಡಿಸಿ ಯಾವುದೇ ಡಿಮಾಂಡ್ ಡ್ರಾಫ್ಟ : ಪೋಸ್ಟಲ್ ಆರ್ಡರ್ : ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಶುಲ್ಕ ಪಾವತಿಸದ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಶುಲ್ಕ ಪಾವತಿಸಲು ಬ್ಯಾಂಕ ಲಿಂಕ್ ಈ ಕೆಳಗಿನಂತಿದೆ.

   https://www.onlinesbi.com/prelogin/icollecthome.htm?corpID=383244

2) ಈ ಹಿಂದೆ ಈ ನ್ಯಾಯಾಲಯದಿಂದ ಬೆರಳಚ್ಚು–ನಕಲುಗಾರರ ಹುದ್ದೆಗೆ ಹೊರಡಿಸಲಾದ ಅಧಿಸೂಚನೆಗಳಿಗೆ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳು ಮತ್ತೊಮ್ಮೆ ಸಂಪೂರ್ಣ ಮಾಹಿತಿಯೊಂದಿಗೆ ON-LINE ಮುಖಾಂತರ ಅರ್ಜಿಯನ್ನು ನಿಗದಿತ ಶುಲ್ಕ ಪಾವತಿ ಮಾಡಿ ಸಲ್ಲಿಸಬೇಕು ಹಾಗೂ ಈ ಹಿಂದೆ ಸಲ್ಲಿಸಲಾಗಿದ್ದ ಅರ್ಜಿ ಕ್ರಮಬದ್ಧವಾಗಿದ್ದಲ್ಲಿ ಮಾತ್ರ ಅವರ ಅರ್ಜಿಯನ್ನು ವಯೋಮಿತಿ ಪರಿಗಣನೆಗೆ ಅಳವಡಿಸಲಾಗುವುದು.

**ಅಭ್ಯರ್ಥಿಗಳು *ON-LINE* ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು :**

1. ಅಭ್ಯರ್ಥಿಗಳು ಅರ್ಜಿಯನ್ನು ON-LINE ಮೂಲಕ ಸಲ್ಲಿಸುವ ಮೊದಲು ಕೊಟ್ಟಿರುವ ಎಲ್ಲಾ ಸೂಚನೆಗಳನ್ನು ಗಮನವಿಟ್ಟು ಓದಿಕೊಳ್ಳಬೇಕು ಮತ್ತು ತಪ್ಪಾಗದಂತೆ ನೋಡಿಕೊಳ್ಳುವುದು, ಒಂದು ವೇಳೆ ಅರ್ಜಿ ಸರಿಯಾಗದಿದ್ದಲ್ಲಿ ತಿರಿಸ್ಕರಿಸಲಾಗುವುದು.
2. ಅಭ್ಯರ್ಥಿಯು ಮೊಬೈಲ್ ಸಂಖ್ಯೆಯನ್ನು ಕಡ್ಡಾಯವಾಗಿ ನಮೂದಿಸುವುದು ಹಾಗೂ ಇ–ಮೇಲ್ ಐಡಿಯನ್ನು ಹೊಂದಿದ್ದಲ್ಲಿ ನಮೂದಿಸುವುದು. ಒಂದು ವೇಳೆ SMS ಅಥವಾ ಇ–ಮೇಲ್ ಮುಖಾಂತರ ತಮಗೆ ಸಂದೇಶ ತಲುಪದಿದ್ದಲ್ಲಿ ಈ ಪ್ರಾಧಿಕಾರ ಹೊಣೆಯಾಗಿರುವುದಿಲ್ಲ.
3. ಅಭ್ಯರ್ಥಿಯ ಭಾವಚಿತ್ರ ಮತ್ತು ಸಹಿಯನ್ನು ಸ್ಕ್ಯಾನ್ ಮಾಡಿ ಅಪ್‌ಲೋಡ ಮಾಡಲು ಈ ಕೆಳಕಂಡ ನಿರ್ದೇಶನಗಳನ್ನು ಪಾಲಿಸತಕ್ಕದ್ದು.
   ಅ) ಬಣ್ಣದ ಭಾವಚಿತ್ರವು ಇತ್ತೀಚಿನದಾಗಿದ್ದು, ಅಳತೆಯಲ್ಲಿ 5cm ಉದ್ದ x 3.6cm ಅಗಲವುಳ್ಳದ್ದಾಗಿರಬೇಕು ಮತ್ತು 50 ಕೆಬಿ ಅಳತೆಯದ್ದಾಗಿರಬೇಕು ಹಾಗೂ ಅದು .jpg ನಮೂನೆಯಲ್ಲಿರಬೇಕು. ಭಾವಚಿತ್ರದ ಹಿಂಬದಿಯು ಬಿಳಿಬಣ್ಣದ್ದಾಗಿರಬೇಕು.
   ಬ) ಭಾವಚಿತ್ರವನ್ನು ಸ್ಕ್ಯಾನ್ ಮಾಡಿ ಅರ್ಜಿಗೆ ಅಪ್‌ಲೋಡ ಮಾಡಬೇಕು (ಯಾವುದೇ ಕಾರಣಕ್ಕೂ ಭಾವಚಿತ್ರದ ಮೇಲೆ ಸಹಿ ಮಾಡಬಾರದು).
   ಕ) ಅಭ್ಯರ್ಥಿಯು ಕಪ್ಪು ಬಾಲ್‌ಪಾಯಿಂಟ್ ಪೆನ್ನಿನಲ್ಲಿ ಬಿಳಿ ಹಾಳೆಯ ಮೇಲೆ ಸಹಿ ಮಾಡಿ (2.5cm ಉದ್ದ x 7.5cm ಅಗಲವುಳ್ಳದ್ದಾಗಿರಬೇಕು ಮತ್ತು 26 ಕೆಬಿ ಅಳತೆಯದ್ದಾಗಿರಬೇಕು ಹಾಗೂ ಅದು .jpg ನಮೂನೆಯಲ್ಲಿರಬೇಕು) ಅಪ್‌ಲೋಡ ಮಾಡಬೇಕು.
4. ತದನಂತರ ಅಭ್ಯರ್ಥಿಯು ON-LINE ಅರ್ಜಿಯಲ್ಲಿ ಕೋರಲಾದ ಎಲ್ಲಾ ಮಾಹಿತಿಗಳನ್ನು ಭರ್ತಿ ಮಾಡಿ ನಿಗದಿತ ಶುಲ್ಕ ಪಾವತಿಸಲು ಅರ್ಜಿಯಲ್ಲಿ ತಿಳಿಸಿರುವಂತೆ ಕ್ರಮ ಕೈಗೊಳ್ಳುವುದು. ತದನಂತರ ಅರ್ಜಿಯನ್ನು ಹಾಗೂ ಶುಲ್ಕವನ್ನು ತುಂಬಿದ ಪ್ರತಿಯನ್ನು download ಮಾಡಿಕೊಂಡು ನೇಮಕಾತಿ ಪ್ರಕ್ರಿಯೆ ಮುಗಿಯುವರೆಗೂ ತಮ್ಮ ಹತ್ತಿರ ಕಾಯ್ದಿರಿಸಕೊಳ್ಳತಕ್ಕದು ಹಾಗೂ ಅರ್ಹತಾ ಪರೀಕ್ಷೆಯ ಸಮಯದಲ್ಲಿ ಹಾಜರು ಪಡಿಸತಕ್ಕದ್ದು.
5. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೇ, ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿ ಹಿಂತಿರುಗಿಸಲಾಗುವುದಿಲ್ಲ.
6. ನ್ಯಾಯಾಲಯದ ಅಧಿಕೃತ ವೆಬ್‌ಸೈಟ್ http://ecourts.gov.in/kalaburagi/online-recruitment ನಲ್ಲಿ **16–08–2015** ದಿನಾಂಕದವರೆಗೂ ಅರ್ಜಿಗಳನ್ನು ಸಲ್ಲಿಸಬಹುದಾಗಿದೆ.

   ಅರ್ಜಿಯನ್ನು ಆನ್‌ಲೈನ್ ಮೂಲಕ ನೊಂದಾಯಿಸಲು : **ಸಲ್ಲಿಸಲು 16–08–2015ರ ರಾತ್ರಿ 11–59ರ** ವರೆಗೆ ಅವಕಾಶವಿರುತ್ತದೆ

   ಮತ್ತು

   ಶುಲ್ಕವನ್ನು ಚಲನ್ ಮುಖಾಂತರ ಪಾವತಿಸಲು **18–08–2015** ಕಡೆಯ ದಿನಾಂಕವಾಗಿದ್ದು ಅದರೊಳಗೆ ಭಾರತೀಯ ಸ್ಟೇಟ್ ಬ್ಯಾಂಕ್ ಶಾಖೆಯ ವ್ಯವಹಾರದ ವೇಳೆಯಲ್ಲಿ ಪಾವತಿಸತಕ್ಕದ್ದು.

7. ಅರ್ಹ ಅಭ್ಯರ್ಥಿಗಳಿಗೆ SMS ಹಾಗೂ ಇ–ಮೇಲ್ ಮುಖಾಂತರ ಮಾಹಿತಿ ನೀಡಲಾಗುವುದು. ಸಂದರ್ಶನಕ್ಕೆ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ನ್ಯಾಯಾಲಯದ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು ಹಾಗೂ ಅಭ್ಯರ್ಥಿಯು ಸದರೀ ಪಟ್ಟಿಯನ್ನು ಡೌನಲೋಡ್ ಮಾಡಿಕೊಂಡು ಸಂದರ್ಶನಕ್ಕೆ ಹಾಜರಾಗುವಾಗ ತಪ್ಪದೇ ಹಾಜರುಪಡಿಸತಕ್ಕದ್ದು.

8. ಅಭ್ಯರ್ಥಿಗಳು ಈ ಕೆಳಕಂಡ ಪ್ರಮಾಣ ಪತ್ರಗಳನ್ನು ನಿಗದಿತ ನಮೂನೆಗಳಲ್ಲಿ ON-LINE ಮೂಲಕ ಅರ್ಜಿ ಭರ್ತಿ ಮಾಡಲು ನಿಗದಿ ಪಡಿಸಿದ ಕೊನೆಯ ದಿನಾಂಕದವರೆಗೆ ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಕೋರಿರುವ ಮೀಸಲಾತಿ ಪ್ರಮಾಣ ಪತ್ರಗಳು ಮತ್ತು ಇತರೇ ಪ್ರಮಾಣ ಪತ್ರಗಳನ್ನು ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಅವುಗಳ ಮೂಲ ಪ್ರತಿಗಳನ್ನು ಪರಿಶೀಲನೆಯ ಸಮಯದಲ್ಲಿ ಹಾಜರು ಪಡಿಸಬೇಕು. ಇತರೇ ನಮೂನೆಗಳಲ್ಲಿ ಅಥವಾ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ, ತಪ್ಪಿದ್ದಲ್ಲಿ ಇವರ ಮೀಸಲಾತಿಯನ್ನು/ಅಭ್ಯರ್ಥಿತ್ವವನ್ನು ಅನರ್ಹಗೊಳಿಸಲಾಗುವುದು.

ಅ) ಹುದ್ದೆಗೆ ನಿಗದಿಪಡಿಸಿದ ಶುಲ್ಕವನ್ನು ಪಾವತಿಸಿದ ಚಲನ್/ವಿವರದ ಪ್ರತಿ.

ಆ) ಜನ್ಮ ದಿನಾಂಕದ ದೃಢೀಕರಣಕ್ಕಾಗಿ ಎಸ್.ಎಸ್.ಎಲ್.ಸಿ ಅಂಕಪಟ್ಟಿ/ವರ್ಗಾವಣೆ ಪಟ್ಟಿ/ಕ್ಯುಮುಲೇಟೀವ್ ರೆಕಾರ್ಡ್ ದಾಖಲಾತಿಗಳು.

ಇ) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ–ಡಿ ಯಲ್ಲಿ ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ–ಇ ಯಲ್ಲಿ ಮತ್ತು 2ಎ, 2ಬಿ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ–ಎಫ್ ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದಿರತಕ್ಕದ್ದು.

ಈ) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದಿರತಕ್ಕದ್ದು.

ಉ) ಮಾಜಿ ಸೈನಿಕ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕ ಸೇವೆಯಿಂದ ಬಿಡುಗಡೆಯಾದ/ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರವನ್ನು ಸಲ್ಲಿಸುವುದು.

ಊ) ವಿಧವೆಯರು, ಜೀತ ಕಾರ್ಮಿಕರು ವಯೋಮಿತಿ ರಿಯಾಯ್ತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರವನ್ನು ಪಡೆದಿರತಕ್ಕದ್ದು.

ಎ) ಅಂಗವಿಕಲ ಮೀಸಲಾತಿ ಪ್ರಮೂಣ ಪತ್ರ (ವಯೋಮಿತಿ ಸಡಿಲಿಕೆಗಾಗಿ ಮೀಸಲಾತಿ ಕೋರಿದ್ದಲ್ಲಿ).

ಏ) ಹೈದ್ರಾಬಾದ – ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳಿಗಾಗಿ ಅರ್ಜಿ ಸಲ್ಲಿಸುವವರು ಸರಕಾರದ ಅಧಿಸೂಚನೆ ಸಂಖ್ಯೆಃ DPAR/43/HKC/2013 ಬೆಂಗಳೂರು ದಿನಾಂಕಃ 29–01–2014ರಲ್ಲಿ ನಿಗದಿಪಡಿಸಲಾದ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು–2013ರ ನಿಯಮ 3(3)ರಲ್ಲಿ ಗೊತ್ತುಪಡಿಸಿರುವಂತೆ "ಅನುಬಂಧ–ಎ" ಯಲ್ಲಿರುವಂತೆ "ಅರ್ಹತಾ ಪ್ರಮಾಣ ಪತ್ರ" ವನ್ನು ಸಂಬಂಧಪಟ್ಟ ಸಹಾಯಕ ಆಯುಕ್ತರವರಿಂದ ಹಾಗೂ ಸೇವಾನಿರತ ಅಭ್ಯರ್ಥಿಗಳು ಸ್ವಗ್ರಾಮ ಪ್ರಮಾಣವನ್ನು ಸಂಬಂಧಪಟ್ಟ ನೇಮಕಾತಿ ಪ್ರಾಧಿಕಾರದಿಂದ ಅಧಿಸೂಚನೆಯ ಕೊನೆಯ ದಿನಾಂಕದ ಒಳಗಾಗಿ ಪಡೆದಿರಬೇಕು.

ಐ) ಅರ್ಜಿಯನ್ನು ಕಳುಹಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗೆ ಇಬ್ಬರು ಗೌರವಾನ್ವಿತ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣ ಪತ್ರ ಹಾಗೂ ಶಾಲಾ ನಡತೆ ಪ್ರಮಾಣ ಪತ್ರಗಳನ್ನು ಪಡೆದಿತರಕ್ಕದ್ದು.

ಒ) ನಿರಾಕ್ಷೇಪಣಾ ಪತ್ರ (ಸರಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ).

9) ಸರಕಾರದ ಸುತ್ತೋಲೆ ಸಂಖ್ಯೆಃ DPAR/78/HKC/2014 ಬೆಂಗಳೂರು ದಿನಾಂಕಃ 22–05–2015 ರನ್ವಯ ಹೈದ್ರಾಬಾದ್–ಕರ್ನಾಟಕ ಸ್ಥಳೀಯ ವೃಂದದ ಮೀಸಲಾತಿ ಅಥವಾ ಮಿಕ್ಕುಳಿದ ವೃಂದದಲ್ಲಿ ಲಭ್ಯವಿರುವ ಹುದ್ದೆಗಳಿಗೂ ಅರ್ಜಿ ಸಲ್ಲಿಸುವ ಬಗ್ಗೆ ಅರ್ಜಿಯಲ್ಲಿ ವಿವರವಾಗಿ ತೋರಿಸಿರುವಂತೆ ಆಯ್ಕೆಗಳನ್ನು ಮಾಡಲು ಅಭ್ಯರ್ಥಿಗಳಿಗೆ ಸೂಚಿಸಲಾಗಿದೆ.

10) ಅಂತಿಮವಾಗಿ ಅಭ್ಯರ್ಥಿಯು ನಕಲಿ ಅಭ್ಯರ್ಥಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗೆ ನಡೆಸಲಾದ ಪರಿಶೀಲನೆ ಪ್ರಕ್ರಿಯೆಗಳ ಸಂದರ್ಭಗಳಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೇ ಆಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು ಕಂಡುಬಂದಲ್ಲಿ ಅವನು/ಅವಳು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೇ, ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಬಿ.ವ್ಹಿ. ಪಾಟೀಲ್**
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು
ಕಲಬುರಗಿ.

**P.R. 212**
**SC - 5**

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಬಸವಭವನ, ಹೈಗ್ರೌಂಡ್ಸ್, ಬೆಂಗಳೂರು-560001.**

**ಅಧಿಸೂಚನೆ**

**ಸಂಖ್ಯೆ: ಕರಾಆ/ಆಡಳಿತ/96/2015, ದಿನಾಂಕ:06.08.2015**

**ವಿಷಯಃ-** ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಶೀಘ್ರಲಿಪಿಗಾರರ ಹುದ್ದೆಗಳನ್ನು ಭರ್ತಿ ಮಾಡುವ ಕುರಿತು.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರಡಿಯಲ್ಲಿ (ಕೇಂದ್ರ ಕಾಯ್ದೆ ಸಂಖ್ಯೆ: 68/1986) ರಚಿತಗೊಂಡು, ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥಪಡಿಸುತ್ತಿರುವ ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ 14 ಶೀಘ್ರಲಿಪಿಗಾರರ ಹುದ್ದೆಗಳಿಗೆ (ಒಟ್ಟು ಖಾಲಿ ಇರುವ 14 ಶೀಘ್ರಲಿಪಿಗಾರರ ಹುದ್ದೆಗಳಲ್ಲಿ ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದಕ್ಕೆ ಮೀಸಲಿರಿಸಿದ 02 ಶೀಘ್ರಲಿಪಿಗಾರರ ಹುದ್ದೆಗಳು ಸೇರಿರುತ್ತವೆ) ಇದರೊಂದಿಗೆ ಲಗತ್ತಿಸಿರುವ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ಮುಂದೆ ಓದುವ ಅರ್ಹತೆಯುಳ್ಳ ಅರ್ಜಿದಾರರು ತಮ್ಮ ಸ್ವಂತ ಕೈಬರಹದಲ್ಲಿಯೇ ಭರ್ತಿ ಮಾಡಿದ ನಿಗದಿತ ನಮೂನೆಯ ಅರ್ಜಿಯನ್ನು **ದಿನಾಂಕ 05 ಸೆಪ್ಟೆಂಬರ್ 2015ರಂದು ಸಂಜೆ: 5-00 ಗಂಟೆಯೊಳಗಾಗಿ** ಅಗತ್ಯ ದಾಖಲೆಗಳೊಂದಿಗೆ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು – 560001, ಇವರಿಗೆ ಸಲ್ಲಿಸತಕ್ಕದ್ದು.

1. **ವಯೋಮಿತಿ**

1) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದಿಗೆ ಅಭ್ಯರ್ಥಿಗೆ ಕನಿಷ್ಠ 18 ವರ್ಷ ವಯಸ್ಸಾಗಿರಬೇಕು ಹಾಗೂ ಗರಿಷ್ಠ ವಯೋಮಿತಿ ಈ ಕೆಳಕಂಡಂತೆ ಮೀರಿರಬಾರದು.

| ಕ್ರ. ಸಂ | ಪ್ರವರ್ಗ | ಗರಿಷ್ಠ ವಯೋಮಿತಿ |
|---|---|---|
| 1 | ಸಾಮಾನ್ಯ ಅರ್ಹತೆ | 35 |
| 2 | ಪ್ರವರ್ಗ-2ಎ, 2ಬಿ, 3ಎ, 3ಬಿ | 38 |
| 3 | ಪ.ಜಾ, ಪ.ಪಂ., ಪ್ರವರ್ಗ-1 | 40 |

1) ವಿಧವೆ, ಮಾಜಿ ಸೈನಿಕರಿಗೆ, ಅಂಗವಿಕಲರಿಗೆ, ಸರ್ಕಾರಿ ನೌಕರರಿಗೆ ಹಾಗೂ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ VI ರಡಿಯಲ್ಲಿ ಸೂಚಿಸಿರುವವರಿಗೆ ಗರಿಷ್ಠ ವಯೋಮಿತಿಯಲ್ಲಿ ವಿನಾಯಿತಿ ಇರುತ್ತದೆ.

(ವಯೋಮಿತಿಯಲ್ಲಿ ಮೀಸಲಾತಿ ಕೋರುವ ಸರ್ಕಾರಿ ನೌಕರರು ನೇಮಕಾತಿ ಪ್ರಾಧಿಕಾರಿಗಳಿಂದ ಸೇವಾ ಪ್ರಮಾಣ ಪತ್ರವನ್ನು ಹಾಗೂ ಇತರೆಯವರು ಸಂಬಂಧಪಟ್ಟ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು)

**2. ವಿದ್ಯಾರ್ಹತೆಃ-**

**ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ ಅರ್ಜಿದಾರರು ಈ ಕೆಳಕಂಡ ವಿದ್ಯಾರ್ಹತೆಯನ್ನು ಹೊಂದಿರಬೇಕು.**

(1) ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು

(2) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ ಮತ್ತು ಇಂಗ್ಲೀಷ್ ಶೀಘ್ರಲಿಪಿ ಪ್ರೌಢದರ್ಜೆ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.

(3) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಬೆರಳಚ್ಚು ಪ್ರೌಢದರ್ಜೆ ಮತ್ತು ಇಂಗ್ಲೀಷ್ ಬೆರಳಚ್ಚು ಪ್ರೌಢ ದರ್ಜೆ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.

(4) ಕಂಪ್ಯೂಟರ್ ತಿಳುವಳಿಕೆ ಅಗತ್ಯವಿದ್ದು, ಕಂಪ್ಯೂಟರ್ ಜ್ಞಾನದ ಬಗ್ಗೆ ಪ್ರಮಾಣ ಪತ್ರ ಹೊಂದಿರಬೇಕು.

**3 ವೇತನ ಶ್ರೇಣಿಃ- ರೂ.** 14550-350-15600-400-17200-450-19000-500-21000-600-24600-700-26700

4. **ಅರ್ಜಿ ಶುಲ್ಕಃ-** ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, ಅಂಗವಿಕಲ ಅಭ್ಯರ್ಥಿಗಳು ಯಾವುದೇ ಶುಲ್ಕವನ್ನು ಭರಿಸಬೇಕಾಗಿಲ್ಲ. ಸಾಮಾನ್ಯ ವರ್ಗದ ಹಾಗೂ ಇನ್ನಿತರೆ ವರ್ಗದ ಅಭ್ಯರ್ಥಿಗಳು ಅರ್ಜಿಯೊಂದಿಗೆ ರೂ.100/-(ಒಂದು ನೂರು ರೂಪಾಯಿ)ರ ಕ್ರಾಸ್ ಮಾಡಿದ ಭಾರತೀಯ ಅಂಚೆ ಆದೇಶ ಪತ್ರವನ್ನು ಬೆಂಗಳೂರು ನಗರದ ಪ್ರಧಾನ ಅಂಚೆ ಕಛೇರಿಯಲ್ಲಿ ನಗದೀಕರಿಸಲು ಅನುಕೂಲವಾಗುವಂತೆ "ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಬೆಂಗಳೂರು" ಇವರ ಹೆಸರಿನಲ್ಲಿ ಪಡೆದು ಅರ್ಜಿಯೊಂದಿಗೆ ಲಗತ್ತಿಸಿರಬೇಕು. ಶುಲ್ಕವನ್ನು ಪಾವತಿ ಮಾಡಿದ ನಂತರ ಶುಲ್ಕವನ್ನು ಅರ್ಜಿದಾರರಿಗೆ ಹಿಂತಿರುಗಿಸಲಾಗುವುದಿಲ್ಲ.

**5 ಅರ್ಜಿ ಸಲ್ಲಿಸಲು ಕೊನೆಯ ದಿನಾಂಕಃ- 05 ಸೆಪ್ಟೆಂಬರ್ 2015ರ ಸಂಜೆ 05.00 ಗಂಟೆಯ ಒಳಗಾಗಿ ಸಲ್ಲಿಸಬೇಕು**

**6 ಅರ್ಜಿ ನಮೂನೆ ಪಡೆಯುವ ವಿಧಾನಃ-**

ಅರ್ಜಿಗಳನ್ನು ಅಂಚೆ ಮೂಲಕ ಯಾವುದೇ ಅರ್ಜಿದಾರರಿಗೆ ಕಳುಹಿಸಲಾಗುವುದಿಲ್ಲ. ಅರ್ಜಿ ನಮೂನೆಗಳನ್ನು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ವೆಬ್‌ಸೈಟ್ http://kscdrc.kar.nic.in ನಲ್ಲಿ "Application for the post of Stenographer" ಎಂಬ ಉಪ ಶೀರ್ಷಿಕೆಯಲ್ಲಿ ಪ್ರಕಟಿಸಿದ್ದು, ಅಲ್ಲಿಂದ ಅರ್ಜಿ ನಮೂನೆಗಳನ್ನು ತೆಗೆದುಕೊಂಡು, ಭರ್ತಿ ಮಾಡಿ ಸಲ್ಲಿಸುವುದು.

7. ಖಾಲಿ ಇರುವ ಸ್ಥಾನಗಳು

**ರಾಜ್ಯ ವ್ಯಾಪಿ ಉಳಿಕೆ ವೃಂದದಲ್ಲಿ ಖಾಲಿ ಇರುವ 12 ಶೀಘ್ರಲಿಪಿಗಾರರ ಹುದ್ದೆಗಳ ರಿಕ್ತ ಸ್ಥಾನಗಳು ಈ ಕೆಳಕಂಡಂತಿರುತ್ತವೆ.**

| ಮೀಸಲಾತಿ | ಇತರೆ | ಮಹಿಳೆ | ಗ್ರಾ.ಅ | ಅಂ.ವಿ | ಮಾ.ಸೈ | ಕ.ಮಾ.ಅ | ಯೋ.ನಿ.ಅ | ಒಟ್ಟು |
|---|---|---|---|---|---|---|---|---|
| ಸಾಮಾನ್ಯ ಅರ್ಹತೆ | 3 | – | 3 | 1* | – | – | 1 | **08** |
| ಪರಿಶಿಷ್ಟ ಜಾತಿ | – | 1 | 1 | – | – | – | – | **02** |
| ಪ್ರವರ್ಗ–II(ಎ) | 1 | – | – | – | – | 1 | – | **02** |
| ಒಟ್ಟು | **04** | **01** | **04** | **01** | – | **01** | **01** | **12** |

* ಚಲನವಲನ ವೈಕಲ್ಯ ಇರುವ ಅಭ್ಯರ್ಥಿಯಿಂದ

**ಸಂವಿಧಾನದ ಅನುಚ್ಛೇದ 371(ಜೆ)ರನ್ವಯ ಹೈದ್ರಾಬಾದ್–ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದದಲ್ಲಿ ಖಾಲಿ ಇರುವ 02 ಶೀಘ್ರಲಿಪಿಗಾರರ ಹುದ್ದೆಗಳನ್ನು ಭರ್ತಿ ಮಾಡಲು ಹುದ್ದೆಗಳ ರಿಕ್ತ ಸ್ಥಾನಗಳು ಈ ಕೆಳಕಂಡಂತಿರುತ್ತವೆ.**

| ಮೀಸಲಾತಿ | ಇತರೆ | ಮಹಿಳೆ | ಗ್ರಾ.ಅ | ಅಂ.ವಿ | ಮಾ.ಸೈ | ಕ.ಮಾ.ಅ | ಯೋ.ನಿ.ಅ | ಒಟ್ಟು |
|---|---|---|---|---|---|---|---|---|
| ಪರಿಶಿಷ್ಟ ಜಾತಿ | 01 | – | – | – | – | – | – | **01** |
| ಪರಿಶಿಷ್ಟ ಪಂಗಡ | 01 | – | – | – | – | – | – | **01** |
| ಒಟ್ಟು | **02** | – | – | – | –– | – | – | **02** |

**8. ಅರ್ಹತಾ ಷರತ್ತುಗಳು:–**

(ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

(ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

(ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

**9. ಇತರೆ ಅರ್ಹತೆ ಮತ್ತು ಷರತ್ತುಗಳು:–**

1. ಅಭ್ಯರ್ಥಿಗಳು ಕನ್ನಡ ಶೀಘ್ರಲಿಪಿ ಪ್ರೌಢದರ್ಜೆ ಮತ್ತು ಇಂಗ್ಲೀಷ್ ಶೀಘ್ರಲಿಪಿ ಪ್ರೌಢದರ್ಜೆ ಹಾಗೂ ಕನ್ನಡ ಬೆರಳಚ್ಚು ಪ್ರೌಢದರ್ಜೆ ಮತ್ತು ಇಂಗ್ಲೀಷ್ ಬೆರಳಚ್ಚು ಪ್ರೌಢ ದರ್ಜೆ ಅಥವಾ ತತ್ಸಮಾನ ಇವುಗಳಲ್ಲಿ ಪಡೆದ ಅಂಕಗಳ ಜೊತೆಗೆ ಯೋಗ್ಯತೆ, ಸೂಕ್ತತೆ ಮತ್ತು ನ್ಯಾಯಾಲಯದ ಆವರಣದಲ್ಲಿ ಸಾಕ್ಷಿಗಳ ಹೇಳಿಕೆಯನ್ನು ಬೆರಳಚ್ಚಿಸುವ ಹಾಗೂ ತೀರ್ಪುಗಳ ಉಕ್ತಲೇಖನವನ್ನು ಕನ್ನಡ ಹಾಗೂ ಆಂಗ್ಲ ಭಾಷೆಯಲ್ಲಿ ಬರೆದುಕೊಂಡು ಲಿಪ್ಯಂತರಗೊಳಿಸುವ ಸಾಮರ್ಥ್ಯವನ್ನು ಹೊಂದಿರುವ ಬಗ್ಗೆ ಪರಿಶೀಲಿಸಿ, ಅರ್ಹ ಮತ್ತು ಯೋಗ್ಯರನ್ನು ರಿಕ್ತ ಸ್ಥಾನವಾರು ಆಯ್ಕೆ ಮಾಡಲಾಗುವುದು.

2 ಅರ್ಜಿಯನ್ನು ಸಲ್ಲಿಸುವಾಗ ಜಾತಿ/ವರ್ಗದಡಿಯಲ್ಲಿ ಮೀಸಲಾತಿಯನ್ನು ಕೋರುವವರು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ "ಡಿ" ರಲ್ಲಿ, ಪ್ರವರ್ಗ–1ರ ಅಭ್ಯರ್ಥಿಯು ನಮೂನೆ "ಇ" ರಲ್ಲಿ, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ವರ್ಗದ ಅಭ್ಯರ್ಥಿಗಳು ನಮೂನೆ "ಎಫ್" ರಲ್ಲಿ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರರಿಂದ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಮತ್ತು ಅಂತಹ ಪ್ರಮಾಣ ಪತ್ರವು ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

3 ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ಚಾಲ್ತಿಯಲ್ಲಿರುವ ನಮೂನೆ–2ರಲ್ಲಿನ ಪ್ರಮಾಣ ಪತ್ರದಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ಶಾಲೆಯ ಮುಖ್ಯೋಪಾಧ್ಯಾಯರಿಂದ ಮೊಹರಿನೊಂದಿಗೆ ಸಹಿ ಪಡೆದಿರುವ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದು ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೊಹರಿನೊಂದಿಗೆ ಮೇಲು ರುಜುವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಹಾಗೂ ಪ್ರಮಾಣ ಪತ್ರ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

4 ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಯು ಚಾಲ್ತಿಯಲ್ಲಿರುವ ನಮೂನೆ–2ರಲ್ಲಿನ ಪ್ರಮಾಣ ಪತ್ರದಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ಶಾಲೆಯ ಮುಖ್ಯೋಪಾಧ್ಯಾಯರಿಂದ ಮೊಹರಿನೊಂದಿಗೆ ಸಹಿ ಪಡೆದಿರುವ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದು ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೊಹರಿನೊಂದಿಗೆ ಮೇಲು ರುಜುವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಮತ್ತು ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1ರಲ್ಲಿನ ಪ್ರಮಾಣ ಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಸಂಬಂಧಿಸಿದ ತಹಸೀಲ್ದಾರ್ ರವರಿಂದ ಪಡೆದಿರತಕ್ಕದ್ದು ಹಾಗೂ ಪ್ರಮಾಣ ಪತ್ರ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

5 ಕನ್ನಡ ಮಾಧ್ಯಮ ಮೀಸಲಾತಿ ಕೋರುವ ಅಭ್ಯರ್ಥಿಗಳು 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ಅಭ್ಯರ್ಥಿಯು ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಚಾಲ್ತಿಯಲ್ಲಿರುವ ನಮೂನೆಯಲ್ಲಿ ಶಾಲೆಯ ಮುಖ್ಯೋಪಾಧ್ಯಾಯರಿಂದ ಮೊಹರಿನೊಂದಿಗೆ ಸಹಿ ಇರುವ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಹಾಗೂ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

6 ಯೋಜನಾ ನಿರಾಶ್ರಿತರು, ಅಂಗವಿಕಲ, ಮಾಜಿ ಸೈನಿಕರು, ಹಾಗೂ ಇತರೆ ಮೀಸಲಾತಿಯಡಿ ಮೀಸಲಾತಿ ಕೋರುವವರು ಸಂಬಂಧಪಟ್ಟ ಪ್ರಾಧಿಕಾರದಿಂದ ಪ್ರಮಾಣಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಹಾಗೂ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

7 ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು, ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ನೇಮಕಾತಿ ಪ್ರಾಧಿಕಾರಿಗಳಿಂದ ನಿರಾಕ್ಷೇಪಣಾ ಪ್ರಮಾಣ ಪತ್ರ ಪಡೆದಿರಬೇಕು.

8 ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು 2013ಕ್ಕೆ ಸಂಬಂಧಿಸಿದಂತೆ ನೇರ ನೇಮಕಾತಿಯಲ್ಲಿ ಸ್ಥಳೀಯ ಅಭ್ಯರ್ಥಿಯಾಗಿ ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದದಲ್ಲಿ ಮೀಸಲಾತಿ ಕೋರುವ ಅಭ್ಯರ್ಥಿಯು ಮೀಸಲಾತಿ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗಾಗಿ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ಪಡೆದುಕೊಂಡಿರಬೇಕು.

9 ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದದಲ್ಲಿ ಹಾಗೂ ರಾಜ್ಯ ವ್ಯಾಪಿ ಉಳಿಕೆ ವೃಂದದಲ್ಲಿ ಖಾಲಿ ಇರುವ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅರ್ಹ ಅಭ್ಯರ್ಥಿಗಳು ನಿಗಧಿತ ಒಂದೇ ಅರ್ಜಿ ನಮೂನೆಯಲ್ಲಿ ಅರ್ಜಿ ಸಲ್ಲಿಸತಕ್ಕದ್ದು ಹಾಗೂ ನಿಗಧಿತ ಅರ್ಜಿ ನಮೂನೆಯಲ್ಲಿರುವಂತೆ ಸ್ಪಷ್ಟವಾಗಿ ಆದ್ಯತೆಯನ್ನು ನಮೂದಿಸುವುದು.

10 ಆಯ್ಕೆಯಲ್ಲಿ ಯಾವುದೇ ರೀತಿಯ ಶಿಫಾರಸ್ಸನ್ನು ಸ್ವೀಕರಿಸುವುದಿಲ್ಲ. ಶಿಫಾರಸ್ಸು ಮಾಡಿಸಿದವರ ಅರ್ಜಿಯನ್ನು ಆಯ್ಕೆಗೆ ಪರಿಗಣಿಸುವುದಿಲ್ಲ.

11 ದಿನಾಂಕ 05 ಸೆಪ್ಟೆಂಬರ್ 2015ರ ಸಂಜೆ 5-00 ಗಂಟೆಯ ನಂತರ ಅಂಚೆಯ ಮೂಲಕ/ಕೊರಿಯರ್ ಮೂಲಕ ಅಥವಾ ಖುದ್ದಾಗಿ ಸಲ್ಲಿಸಲ್ಪಡುವ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

12 ಕೊನೆಯ ದಿನಾಂಕದ ನಂತರ ಸ್ವೀಕೃತವಾಗುವ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೆ ತಿರಸ್ಕರಿಸಲಾಗುವುದು.

13 ಅಪೂರ್ಣವಾಗಿ ಭರ್ತಿ ಮಾಡಿರುವ ಹಾಗೂ ಅಪೂರ್ಣವಾಗಿ ದಾಖಲೆಗಳನ್ನು ಸಲ್ಲಿಸಿರುವ ಹಾಗೂ ನಿಗಧಿತ ಅರ್ಜಿ ನಮೂನೆಯಲ್ಲಿ ಸಲ್ಲಿಸದ ಅರ್ಜಿಗಳನ್ನು ಹಾಗೂ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವಂತೆ ಅರ್ಜಿಯೊಂದಿಗೆ ನಿಗಧಿತ ಶುಲ್ಕ ಪಾವತಿ ಮಾಡದೇ ಇರುವ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೆ ತಿರಸ್ಕರಿಸಲಾಗುವುದು.

14 ಅಧಿಸೂಚನೆಯಲ್ಲಿರುವ ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದದ ಖಾಲಿ ಹುದ್ದೆಗಳು ಹೈದ್ರಾಬಾದ್-ಕರ್ನಾಟಕ ಪ್ರಾಂತ್ಯದ 6 ಜಿಲ್ಲೆಗಳಿಗೆ ಹಾಗೂ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು ಇಲ್ಲಿ ಹೈದ್ರಾಬಾದ್-ಕರ್ನಾಟಕದವರಿಗೆ ಮೀಸಲಿರಿಸಿದ ಹುದ್ದೆಗಳಿಗೆ ಅನ್ವಯಿಸುತ್ತವೆ ಹಾಗೂ ರಾಜ್ಯ ವ್ಯಾಪಿ ಉಳಿಕೆ ವೃಂದದ ಖಾಲಿ ಹುದ್ದೆಗಳು ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದಕ್ಕೆ ಸಂಬಂಧಿಸಿದಂತೆ ಹೈದ್ರಾಬಾದ್-ಕರ್ನಾಟಕ ಪ್ರಾಂತ್ಯದ 6 ಜಿಲ್ಲೆಗಳಿಗೆ ಹಾಗೂ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಹೈದ್ರಾಬಾದ್-ಕರ್ನಾಟಕದವರಿಗೆ ಮೀಸಲಿರಿಸಿದ ಹುದ್ದೆಗಳನ್ನು ಹೊರತುಪಡಿಸಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಎಲ್ಲಾ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆ ಅನ್ವಯಿಸುತ್ತವೆ.

15 ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯಲ್ಲಿ ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದವನ್ನು ರಚಿಸಿರುವುದರಿಂದ ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದಕ್ಕೆ ಆಯ್ಕೆಯಾಗುವ ಅಭ್ಯರ್ಥಿಗಳನ್ನು ಹೈದ್ರಾಬಾದ್-ಕರ್ನಾಟಕದ 6 ಜಿಲ್ಲೆಗಳಲ್ಲಿನ ಯಾವುದೇ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗೆ ಹಾಗೂ ಮುಖ್ಯ ಕಛೇರಿಯಾದ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದಕ್ಕೆ ಮೀಸಲಿರಿಸಿರುವ ಹುದ್ದೆಗೆ ನೇಮಕಾತಿ ಮಾಡಿ ಸ್ಥಳ ನಿಯೋಜನೆ ಮಾಡುವ ಸಂಪೂರ್ಣ ಅಧಿಕಾರವನ್ನು ನೇಮಕಾತಿ ಪ್ರಾಧಿಕಾರ ಹೊಂದಿರುತ್ತದೆ.

16 ಆಯ್ಕೆ ಪ್ರಕ್ರಿಯೆಯಲ್ಲಿ ಹುದ್ದೆಗಳ ಸಂಖ್ಯೆಯನ್ನು ಕಡಿಮೆ ಮಾಡುವ ಅಥವಾ ಹೆಚ್ಚಿಸುವ ಅಧಿಕಾರವನ್ನು ನೇಮಕಾತಿ ಪ್ರಾಧಿಕಾರ ಹೊಂದಿರುತ್ತದೆ.

17 ಭರ್ತಿ ಮಾಡಿರುವ ನಿಗಧಿತ ಅರ್ಜಿ ನಮೂನೆಯೊಂದಿಗೆ ಸ್ವ-ವಿಳಾಸವನ್ನು ಬರೆದಿರುವ ಒಂದು ಅಂಚೆ ಲಕೋಟೆಯನ್ನು ಸಲ್ಲಿಸಬೇಕು.

18 ಅರ್ಜಿಯನ್ನು ಸಲ್ಲಿಸುವ ಲಕೋಟೆಯ ಮೇಲೆ **"ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಶೀಘ್ರಲಿಪಿಗಾರರ ಹುದ್ದೆಗಾಗಿ ಅರ್ಜಿ"** ಎಂದು ದಪ್ಪ ಅಕ್ಷರಗಳಲ್ಲಿ ಬರೆದಿರಬೇಕು.

19 ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ನಂತರದ ಮೊದಲನೆ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

20 ಮೂರು ನಡತೆ ಪ್ರಮಾಣ ಪತ್ರಗಳುಃ- ಇವುಗಳಲ್ಲಿ 01 ಅವನು ಅಥವಾ ಅವಳು ಅಂತಿಮವಾಗಿ ಅಭ್ಯಾಸ ಮಾಡಿದ ಶಾಲೆ ಅಥವಾ ಕಾಲೇಜಿನ ಮುಖ್ಯೋಪಾಧ್ಯಾಯರು/ಪ್ರಾಂಶುಪಾಲರಿಂದ ಪಡೆದಿರಬೇಕು. ಇನ್ನುಳಿದ 02 ನಡತೆ ಪ್ರಮಾಣ ಪತ್ರಗಳನ್ನು ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದಿರುವುಗಳಾಗಿರಬೇಕು. (ಗಣ್ಯ ವ್ಯಕ್ತಿಗಳು ಅಭ್ಯರ್ಥಿಯ ಸಂಬಂಧಿಕರಾಗಿರಬಾರದು)

21 ಈ ಅಧಿಸೂಚನೆಯ ಅನ್ವಯ ನೇಮಕಾತಿಯಾಗಿ ಕಾರ್ಯನಿರ್ವಹಿಸುವ ನೌಕರರಿಗೆ ಎನ್.ಪಿ.ಎಸ್. ಪಿಂಚಣಿ ಸೌಲಭ್ಯ ಅನ್ವಯವಾಗುತ್ತದೆ.

22 ಆಯ್ಕೆಯಾದ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ ಹಾಗೂ ಪರಿವೀಕ್ಷಣಾ ಅವಧಿಯಲ್ಲಿ ನಿಗಧಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

23 ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸುವುದು ಹಾಗೂ ನೈತಿಕ ದುರ್ನಡತೆಯಿಂದಾಗಿ/ನೀತಿಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ/ಕೇಂದ್ರ/ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ/ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ/ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗುತ್ತಾರೆ.

24 ಅರ್ಜಿಯಲ್ಲಿ ತಪ್ಪು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ.

25 ಅರ್ಜಿಯಲ್ಲಿ ನೀಡುವ ವಿಳಾಸವೇ ಅಂತಿಮವಾಗಿದ್ದು ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿ ಕೊಡಲಾಗುವುದು. ನಂತರ ವಿಳಾಸ ಬದಲಾವಣೆ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಪರಿಗಣಿಸಲಾಗುವುದಿಲ್ಲ.

26 ಯಾವುದೇ ವರ್ಗದ ಮಹಿಳಾ, ಗ್ರಾಮೀಣ, ಅಂಗವಿಕಲ, ಕನ್ನಡ ಮಾಧ್ಯಮ, ಯೋಜನಾ ನಿರಾಶ್ರಿತ ಮೀಸಲಾತಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದ ಪಕ್ಷದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗದ ಅರ್ಹ ಇತರ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಹುದ್ದೆಗಳನ್ನು ಹೊರತುಪಡಿಸಿ ಇತರೆ ವರ್ಗದ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

27 ಅಭ್ಯರ್ಥಿಗಳು ನಿಗಧಿತ ಅರ್ಜಿಯಲ್ಲಿ ನಮೂದುಮಾಡುವ ವಿದ್ಯಾರ್ಹತೆ, ಕೋರಿರುವ ಮೀಸಲಾತಿ/ವಿನಾಯತಿ/ನಿರಾಕ್ಷೇಪಣಾ ಪತ್ರ ಇತ್ಯಾದಿ ಸಂಬಂಧಪಟ್ಟ ದಾಖಲೆಗಳ ಒಂದು ಸೆಟ್ ಸ್ವಯಂ ದೃಢೀಕರಿಸಿದ ಪ್ರತಿಯನ್ನು ಮತ್ತು ನಡತೆ ಪ್ರಮಾಣ ಪತ್ರಗಳ ಅಸಲು ಪ್ರತಿಗಳನ್ನು ನಿಗಧಿತ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

28 ಅಭ್ಯರ್ಥಿಗಳು ನಿಗಧಿತ ಅರ್ಜಿಯಲ್ಲಿ ನಮೂದು ಮಾಡುವ ವಿದ್ಯಾರ್ಹತೆ, ಕೋರಿರುವ ಮೀಸಲಾತಿ/ವಿನಾಯತಿ/ನಿರಾಕ್ಷೇಪಣಾ ಪತ್ರ ಇತ್ಯಾದಿ ಸಂಬಂಧಪಟ್ಟ ಮೂಲ ದಾಖಲೆಗಳನ್ನು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗವು ಪರಿಶೀಲನೆಗೆ ಕೋರಿದಾಗ ಕಡ್ಡಾಯವಾಗಿ ಹಾಜರುಪಡಿಸಬೇಕು.

**ನ್ಯಾಯಮೂರ್ತಿ ಬಿ.ಎಸ್.ಇಂದ್ರಕಲಾ**

**PR. 213** ಅಧ್ಯಕ್ಷರು,

**SC. 10** ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು.

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು 560001

## ಅಧಿಸೂಚನೆ

**ಸಂಖ್ಯೆ: ಕರಾಆ/ಆಡಳಿತ/98/2015, ದಿನಾಂಕ 06.08.2015**

**ವಿಷಯ:–** ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯಲ್ಲಿ ಖಾಲಿ ಇರುವ ಗ್ರೂಪ್– 'ಡಿ' ಅಥವಾ ಪೀವನ್ ಹುದ್ದೆಗಳನ್ನು ಭರ್ತಿ ಮಾಡುವ ಕುರಿತು.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರಡಿಯಲ್ಲಿ ರಚಿತಗೊಂಡು (ಕೇಂದ್ರ ಕಾಯ್ದೆ ಸಂಖ್ಯೆ: 68/1986ರ) ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥಪಡಿಸುತ್ತಿರುವ ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯಲ್ಲಿ ಖಾಲಿ ಇರುವ **24 ಗ್ರೂಪ್– 'ಡಿ' ಅಥವಾ ಪೀವನ್ ಹುದ್ದೆಗೆ** (ಖಾಲಿ ಇರುವ 24 ಗ್ರೂಪ್–ಡಿ ಅಥವಾ ಪೀವನ್ ಹುದ್ದೆಗಳಲ್ಲಿ ಹೈದ್ರಾಬಾದ್–ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದಕ್ಕೆ ಮೀಸಲಿರಿಸಿರುವ 10 ಗ್ರೂಪ್–ಡಿ ಅಥವಾ ಪೀವನ್ ಹುದ್ದೆಗಳು ಸಹ ಒಳಗೊಂಡಿರುತ್ತವೆ.) ಇದರೊಂದಿಗೆ ಲಗತ್ತಿಸಿರುವ ನಿಗಧಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ಮುಂದೆ ಓದುವ ಅರ್ಹತೆಗಳುಳ್ಳ ಅರ್ಜಿದಾರರು ತಮ್ಮ ಸ್ವಂತ ಕೈಬರಹದಲ್ಲಿಯೇ ಭರ್ತಿ ಮಾಡಿದ ಅರ್ಜಿಯನ್ನು ಅಗತ್ಯ ದಾಖಲಾತಿಗಳೊಂದಿಗೆ, **ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು – 560 001 ಇಲ್ಲಿಗೆ ದಿನಾಂಕ 05 ಸೆಪ್ಟೆಂಬರ್ 2015ರ ಸಂಜೆ 05–00 ಗಂಟೆಯೊಳಗಾಗಿ ತಲುಪುವಂತೆ ಸಲ್ಲಿಸುವುದು.**

**1. ವಯೋಮಿತಿ**

1) ಅರ್ಜಿಯನ್ನು ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದಂದಿಗೆ ಅಭ್ಯರ್ಥಿಗೆ ಕನಿಷ್ಠ 18 ವರ್ಷ ವಯಸ್ಸಾಗಿರಬೇಕು ಹಾಗೂ ಗರಿಷ್ಠ ವಯೋಮಿತಿ ಈ ಕೆಳಕಂಡಂತೆ ಮೀರಿರಬಾರದು.

| ಕ್ರ. ಸಂ | ಪ್ರವರ್ಗ | ಗರಿಷ್ಠ ವಯೋಮಿತಿ |
|---|---|---|
| 1 | ಸಾಮಾನ್ಯ ಅರ್ಹತೆ | 35 |
| 2 | ಪ್ರವರ್ಗ–2ಎ, 2ಬಿ, 3ಎ, 3ಬಿ | 38 |
| 3 | ಪ.ಜಾ, ಪ.ಪಂ., ಪ್ರವರ್ಗ–1 | 40 |

2) ವಿಧವೆ, ಮಾಜಿ ಸೈನಿಕರಿಗೆ, ಅಂಗವಿಕಲರಿಗೆ, ಸರ್ಕಾರಿ ನೌಕರರಿಗೆ ಹಾಗೂ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ VI ರಡಿಯಲ್ಲಿ ಸೂಚಿಸಿರುವವರಿಗೆ ಗರಿಷ್ಠ ವಯೋಮಿತಿಯಲ್ಲಿ ವಿನಾಯಿತಿ ಇರುತ್ತದೆ.

(ವಯೋಮಿತಿಯಲ್ಲಿ ಮೀಸಲಾತಿ ಕೋರುವ ಸರ್ಕಾರಿ ನೌಕರರು ನೇಮಕಾತಿ ಪ್ರಾಧಿಕಾರಿಗಳಿಂದ ಸೇವಾ ಪ್ರಮಾಣ ಪತ್ರವನ್ನು ಹಾಗೂ ಇತರೆಯವರು ಸಂಬಂಧಪಟ್ಟ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು)

**2.ವಿದ್ಯಾರ್ಹತೆ**

ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ ಅಭ್ಯರ್ಥಿಯು ಎಸ್.ಎಸ್.ಎಲ್.ಸಿ.ಅಥವಾ ತತ್ಸಮಾನ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು. ಕನ್ನಡ ಓದಲು ಮತ್ತು ಬರೆಯಲು ಬರುವಂತಹವರಾಗಿರಬೇಕು.

**3.ವೇತನ ಶ್ರೇಣಿ.**

ರೂ.9600–200–12000–250–13000–300–14200–350–14550.

**4.ಅರ್ಜಿ ಶುಲ್ಕಃ–** ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ /ಪ್ರವರ್ಗ–1/ ಅಂಗವಿಕಲ ಅಭ್ಯರ್ಥಿಗಳು ಯಾವುದೇ ಶುಲ್ಕವನ್ನು ಭರಿಸಬೇಕಾಗಿಲ್ಲ. ಸಾಮಾನ್ಯ ವರ್ಗದ ಹಾಗೂ ಇನ್ನಿತರೆ ವರ್ಗದ ಅಭ್ಯರ್ಥಿಗಳು ಅರ್ಜಿಯೊಂದಿಗೆ ರೂ.100/–(ಒಂದು ನೂರು ರೂಪಾಯಿ)ರ ಕ್ರಾಸ್ ಮಾಡಿದ ಭಾರತೀಯ ಅಂಚೆ ಆದೇಶ ಪತ್ರವನ್ನು ಬೆಂಗಳೂರು ನಗರದ ಪ್ರಧಾನ ಅಂಚೆ ಕಛೇರಿಯಲ್ಲಿ ನಗದೀಕರಿಸಲು ಅನುಕೂಲವಾಗುವಂತೆ "ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಬೆಂಗಳೂರು" ಇವರ ಹೆಸರಿನಲ್ಲಿ ಪಡೆದು ಅರ್ಜಿಯೊಂದಿಗೆ ಲಗತ್ತಿಸಿರಬೇಕು. ಶುಲ್ಕವನ್ನು ಪಾವತಿ ಮಾಡಿದ ನಂತರ ಶುಲ್ಕವನ್ನು ಅರ್ಜಿದಾರರಿಗೆ ಹಿಂತಿರುಗಿಸಲಾಗುವುದಿಲ್ಲ.

**5.ಅರ್ಜಿ ಸಲ್ಲಿಸಲು ಕೊನೆಯ ದಿನಾಂಕಃ– 05 ಸೆಪ್ಟೆಂಬರ್ 2015 ಸಂಜೆ 05.00 ಗಂಟೆಯ ಒಳಗಾಗಿ ಸಲ್ಲಿಸಬೇಕು.**

**6.ಅರ್ಜಿ ನಮೂನೆ ಪಡೆಯುವ ವಿಧಾನಃ–**

ಅರ್ಜಿಗಳನ್ನು ಅಂಚೆ ಮೂಲಕ ಯಾವುದೇ ಅರ್ಜಿದಾರರಿಗೆ ಕಳುಹಿಸಿ ಕೊಡಲಾಗುವುದಿಲ್ಲ. ಅರ್ಜಿ ನಮೂನೆಗಳನ್ನು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ವೆಬ್‌ಸೈಟ್: http://kscdrc.kar.nic.in ರಲ್ಲಿ "Application Form for the post of Group-D/Peon" ಎಂದು ಪ್ರಕಟಿಸಿದ್ದು, ಅಲ್ಲಿಂದ ನಿಗಧಿತ ಅರ್ಜಿ ನಮೂನೆಗಳನ್ನು ಪಡೆದುಕೊಳ್ಳಬಹುದು

**7.ಖಾಲಿ ಇರುವ ಸ್ಥಾನಗಳು**

**ರಾಜ್ಯ ವ್ಯಾಪಿ ಉಳಿಕೆ ವೃಂದದಲ್ಲಿ ಖಾಲಿ ಇರುವ 14 ಹುದ್ದೆಗಳ ರಿಕ್ತ ಸ್ಥಾನಗಳು ಈ ಕೆಳಕಂಡಂತಿರುತ್ತವೆ.**

| ಮೀಸಲಾತಿ | ಇತರೆ | ಮಹಿಳೆ | ಗ್ರಾ.ಅ | ಅಂ.ವಿ | ಮಾ.ಸೈ | ಕ.ಮಾ.ಅ | ಯೋ.ನಿ.ಅ | ಒಟ್ಟು |
|---|---|---|---|---|---|---|---|---|
| **ಸಾಮಾನ್ಯ ಅರ್ಹತೆ** | 03 | 01 | 02 | – | 01 | – | – | **07** |
| **ಪರಿಶಿಷ್ಟ ಜಾತಿ** | 01 | – | 01 | – | 01 | – | – | **03** |
| **ಪರಿಶಿಷ್ಟ ಪಂಗಡ** | 01 | – | – | – | – | – | – | **01** |
| ಪ್ರವರ್ಗ–I | – | – | – | – | – | – | – | |
| ಪ್ರವರ್ಗ–II(ಎ) | – | – | – | – | 01 | – | – | **01** |
| ಪ್ರವರ್ಗ– II(ಬಿ) | – | – | 01 | – | – | – | – | **01** |
| ಪ್ರವರ್ಗ–III(ಎ) | – | – | – | – | – | – | – | – |
| ಪ್ರವರ್ಗ–III(ಬಿ) | – | – | 01 | – | – | – | – | **01** |
| **ಒಟ್ಟು** | **05** | **01** | **05** | – | **03** | – | – | **14** |

**ಸಂವಿಧಾನದ ಅನುಚ್ಛೇದ 371(ಜೆ)ರನ್ವಯ ಹೈದ್ರಾಬಾದ್–ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದದಲ್ಲಿ ಖಾಲಿ ಇರುವ 10 ಹುದ್ದೆಗಳ ರಿಕ್ತ ಸ್ಥಾನಗಳು ಈ ಕೆಳಕಂಡಂತಿರುತ್ತವೆ.**

| ಮೀಸಲಾತಿ | ಇತರೆ | ಮಹಿಳೆ | ಗ್ರಾ.ಅ | ಅಂ.ವಿ | ಮಾ.ಸೈ | ಕ.ಮಾ.ಅ | ಯೋ.ನಿ.ಅ | ಒಟ್ಟು |
|---|---|---|---|---|---|---|---|---|
| **ಸಾಮಾನ್ಯ ಅರ್ಹತೆ** | – | 02 | 01 | * 01 | – | – | – | **04** |
| **ಪರಿಶಿಷ್ಟ ಜಾತಿ** | 01 | 01 | – | – | – | – | – | **02** |
| **ಪರಿಶಿಷ್ಟ ಪಂಗಡ** | – | – | – | – | – | – | – | – |
| ಪ್ರವರ್ಗ–I | 01 | – | – | – | – | – | – | **01** |
| ಪ್ರವರ್ಗ–II(ಎ) | 01 | 01 | – | – | – | – | – | **02** |
| ಪ್ರವರ್ಗ–II(ಬಿ) | 01 | – | – | – | – | – | – | **01** |
| ಪ್ರವರ್ಗ–III(ಎ) | – | – | – | – | – | – | – | – |
| ಪ್ರವರ್ಗ–III(ಬಿ) | – | – | – | – | – | – | – | – |
| **ಒಟ್ಟು** | **04** | **04** | **01** | **01** | – | – | – | **10** |

* ಅಂಧ/ದೃಷ್ಟಿಮಾಂದ್ಯತೆ

ಸೂಚನೆಃ– ದೃಷ್ಟಿಮಾಂದ್ಯತೆಯ ಅರ್ಹ ಅಭ್ಯರ್ಥಿ ಲಭ್ಯವಿಲ್ಲದಿದ್ದಲ್ಲಿ ಬೇರೆ ಅಂಗವಿಕಲತೆ ಇರುವವರನ್ನು ಆಯ್ಕೆಗೆ ಪರಿಗಣಿಸಲಾಗುವುದು.

**8. ಅರ್ಹತಾ ಷರತ್ತುಗಳುಃ–**

(ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

(ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

(ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

9. **ಇತರೆ ಅರ್ಹತೆ ಮತ್ತು ಷರತ್ತುಗಳು**

1. ಅರ್ಜಿಯನ್ನು ಸಲ್ಲಿಸುವಾಗ ಜಾತಿ/ವರ್ಗದಡಿಯಲ್ಲಿ ಮೀಸಲಾತಿಯನ್ನು ಕೋರುವವರು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ "ಡಿ" ರಲ್ಲಿ, ಪ್ರವರ್ಗ-1ರ ಅಭ್ಯರ್ಥಿಯು ನಮೂನೆ "ಇ" ರಲ್ಲಿ, ಪ್ರವರ್ಗ-2ಎ, ಪ್ರವರ್ಗ-2ಬಿ, ಪ್ರವರ್ಗ-3ಎ ಮತ್ತು ಪ್ರವರ್ಗ-3ಬಿ ವರ್ಗದ ಅಭ್ಯರ್ಥಿಗಳು ನಮೂನೆ "ಎಫ್" ರಲ್ಲಿ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರರಿಂದ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಮತ್ತು ಅಂತಹ ಪ್ರಮಾಣ ಪತ್ರವು ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

2 ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ಚಾಲ್ತಿಯಲ್ಲಿರುವ ನಮೂನೆ-2ರಲ್ಲಿನ ಪ್ರಮಾಣ ಪತ್ರದಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ಶಾಲೆಯ ಮುಖ್ಯೋಪಾಧ್ಯಾಯರಿಂದ ಮೊಹರಿನೊಂದಿಗೆ ಸಹಿ ಪಡೆದಿರುವ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದು ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೊಹರಿನೊಂದಿಗೆ ಮೇಲು ರುಜುವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಹಾಗೂ ಪ್ರಮಾಣ ಪತ್ರ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

3 ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಯು ಚಾಲ್ತಿಯಲ್ಲಿರುವ ನಮೂನೆ-2ರಲ್ಲಿನ ಪ್ರಮಾಣ ಪತ್ರದಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ಶಾಲೆಯ ಮುಖ್ಯೋಪಾಧ್ಯಾಯರಿಂದ ಮೊಹರಿನೊಂದಿಗೆ ಸಹಿ ಪಡೆದಿರುವ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದು ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೊಹರಿನೊಂದಿಗೆ ಮೇಲು ರುಜುವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಮತ್ತು ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ-1ರಲ್ಲಿನ ಪ್ರಮಾಣ ಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಸಂಬಂಧಿಸಿದ ತಹಸೀಲ್ದಾರ್ ರವರಿಂದ ಪಡೆದಿರತಕ್ಕದ್ದು ಹಾಗೂ ಪ್ರಮಾಣ ಪತ್ರ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

4 ಕನ್ನಡ ಮಾಧ್ಯಮ ಮೀಸಲಾತಿ ಕೋರುವ ಅಭ್ಯರ್ಥಿಗಳು 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ಅಭ್ಯರ್ಥಿಯು ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಚಾಲ್ತಿಯಲ್ಲಿರುವ ನಮೂನೆಯಲ್ಲಿ ಶಾಲೆಯ ಮುಖ್ಯೋಪಾಧ್ಯಾಯರಿಂದ ಮೊಹರಿನೊಂದಿಗೆ ಸಹಿ ಇರುವ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಹಾಗೂ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

5 ಯೋಜನಾ ನಿರಾಶ್ರಿತರು, ಅಂಗವಿಕಲ, ಮಾಜಿ ಸೈನಿಕರು, ಹಾಗೂ ಇತರೆ ಮೀಸಲಾತಿಯಡಿ ಮೀಸಲಾತಿ ಕೋರುವವರು ಸಂಬಂಧಪಟ್ಟ ಪ್ರಾಧಿಕಾರದಿಂದ ಪ್ರಮಾಣಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಹಾಗೂ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

6 ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು, ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ನೇಮಕಾತಿ ಪ್ರಾಧಿಕಾರಿಗಳಿಂದ ನಿರಾಕ್ಷೇಪಣಾ ಪ್ರಮಾಣ ಪತ್ರ ಪಡೆದಿರಬೇಕು.

7 ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು 2013ಕ್ಕೆ ಸಂಬಂಧಿಸಿದಂತೆ ನೇರ ನೇಮಕಾತಿಯಲ್ಲಿ ಸ್ಥಳೀಯ ಅಭ್ಯರ್ಥಿಯಾಗಿ ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದದಲ್ಲಿ ಮೀಸಲಾತಿ ಕೋರುವ ಅಭ್ಯರ್ಥಿಯು ಮೀಸಲಾತಿ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗಾಗಿ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ಪಡೆದುಕೊಂಡಿರಬೇಕು.

8 ಗ್ರೂಪ್-ಡಿ ಅಥವಾ ಪೀವನ್ ಹುದ್ದೆಯ ಕಾರ್ಯನಿರ್ವಹಿಸಲು ಸೂಕ್ತರೇ ಮತ್ತು ಅರ್ಹರೆ ಎಂಬುದನ್ನು ಪರಿಶೀಲಿಸಿಕೊಂಡು, ನೇಮಕಾತಿ ಮಾಡಿಕೊಳ್ಳಲಾಗುವುದು.

9 ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದದಲ್ಲಿ ಹಾಗೂ ಕರ್ನಾಟಕ ರಾಜ್ಯ ವ್ಯಾಪಿ ಉಳಿಕೆ ವೃಂದದಲ್ಲಿ ಖಾಲಿ ಇರುವ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅರ್ಹ ಅಭ್ಯರ್ಥಿಗಳು ನಿಗಧಿತ ಒಂದೇ ಅರ್ಜಿ ನಮೂನೆಯಲ್ಲಿ ಅರ್ಜಿ ಸಲ್ಲಿಸತಕ್ಕದ್ದು ಹಾಗೂ ನಿಗಧಿತ ಅರ್ಜಿ ನಮೂನೆಯಲ್ಲಿರುವಂತೆ ಸ್ಪಷ್ಟವಾಗಿ ಆದ್ಯತೆಯನ್ನು ನಮೂದಿಸುವುದು.

10 ಆಯ್ಕೆಯಲ್ಲಿ ಯಾವುದೇ ರೀತಿಯ ಶಿಫಾರಸ್ಸನ್ನು ಸ್ವೀಕರಿಸುವುದಿಲ್ಲ. ಶಿಫಾರಸ್ಸು ಮಾಡಿಸಿದವರ ಅರ್ಜಿಯನ್ನು ಆಯ್ಕೆಗೆ ಪರಿಗಣಿಸುವುದಿಲ್ಲ.

11 ದಿನಾಂಕ 05 ಸೆಪ್ಟೆಂಬರ್ 2015ರ ಸಂಜೆ 5-00 ಗಂಟೆಯ ನಂತರ ಅಂಚೆಯ ಮೂಲಕ/ಕೊರಿಯರ್ ಮೂಲಕ ಅಥವಾ ಖುದ್ದಾಗಿ ಸಲ್ಲಿಸಲ್ಪಡುವ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

12 ಕೊನೆಯ ದಿನಾಂಕದ ನಂತರ ಸ್ವೀಕೃತವಾಗುವ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೆ ತಿರಸ್ಕರಿಸಲಾಗುವುದು.

13 ಅಪೂರ್ಣವಾಗಿ ಭರ್ತಿ ಮಾಡಿರುವ ಹಾಗೂ ಅಪೂರ್ಣವಾಗಿ ದಾಖಲೆಗಳನ್ನು ಸಲ್ಲಿಸಿರುವ ಹಾಗೂ ನಿಗಧಿತ ಅರ್ಜಿ ನಮೂನೆಯಲ್ಲಿ ಸಲ್ಲಿಸದ ಅರ್ಜಿಗಳನ್ನು ಹಾಗೂ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವಂತೆ ಅರ್ಜಿಯೊಂದಿಗೆ ನಿಗಧಿತ ಶುಲ್ಕ ಪಾವತಿ ಮಾಡದೇ ಇರುವ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೆ ತಿರಸ್ಕರಿಸಲಾಗುವುದು.

14 ಅಧಿಸೂಚನೆಯಲ್ಲಿರುವ ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದ ಖಾಲಿ ಹುದ್ದೆಗಳು ಹೈದ್ರಾಬಾದ್-ಕರ್ನಾಟಕ ಪ್ರಾಂತ್ಯದ 6 ಜಿಲ್ಲೆಗಳಿಗೆ ಹಾಗೂ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು ಇಲ್ಲಿ ಹೈದ್ರಾಬಾದ್-ಕರ್ನಾಟಕದವರಿಗೆ ಮೀಸಲಿರಿಸಿದ ಹುದ್ದೆಗಳಿಗೆ ಅನ್ವಯಿಸುತ್ತವೆ ಹಾಗೂ ರಾಜ್ಯ ವ್ಯಾಪಿ ಉಳಿಕೆ ವೃಂದದ ಖಾಲಿ ಹುದ್ದೆಗಳು ಹೈದ್ರಾಬಾದ್-ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದಕ್ಕೆ ಸಂಬಂಧಿಸಿದಂತೆ ಹೈದ್ರಾಬಾದ್-ಕರ್ನಾಟಕ ಪ್ರಾಂತ್ಯದ 6 ಜಿಲ್ಲೆಗಳಿಗೆ ಹಾಗೂ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಹೈದ್ರಾಬಾದ್-ಕರ್ನಾಟಕದವರಿಗೆ ಮೀಸಲಿರಿಸಿದ ಹುದ್ದೆಗಳನ್ನು ಹೊರತುಪಡಿಸಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಎಲ್ಲಾ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆ ಅನ್ವಯಿಸುತ್ತವೆ.

15 ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯಲ್ಲಿ ಹೈದ್ರಾಬಾದ್–ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದವನ್ನು ರಚಿಸಿರುವುದರಿಂದ ಹೈದ್ರಾಬಾದ್–ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದಕ್ಕೆ ಆಯ್ಕೆಯಾಗುವ ಅಭ್ಯರ್ಥಿಗಳನ್ನು ಹೈದ್ರಾಬಾದ್–ಕರ್ನಾಟಕದ 6 ಜಿಲ್ಲೆಗಳಲ್ಲಿನ ಯಾವುದೇ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗೆ ಹಾಗೂ ಮುಖ್ಯ ಕಛೇರಿಯಾದ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಹೈದ್ರಾಬಾದ್–ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದಕ್ಕೆ ಮೀಸಲಿರಿಸಿರುವ ಹುದ್ದೆಗೆ ನೇಮಕಾತಿ ಮಾಡಿ ಸ್ಥಳ ನಿಯೋಜನೆ ಮಾಡುವ ಸಂಪೂರ್ಣ ಅಧಿಕಾರವನ್ನು ನೇಮಕಾತಿ ಪ್ರಾಧಿಕಾರ ಹೊಂದಿರುತ್ತದೆ.

16 ಆಯ್ಕೆ ಪ್ರಕ್ರಿಯೆಯಲ್ಲಿ ಹುದ್ದೆಗಳ ಸಂಖ್ಯೆಯನ್ನು ಕಡಿಮೆ ಮಾಡುವ ಅಥವಾ ಹೆಚ್ಚಿಸುವ ಅಧಿಕಾರವನ್ನು ನೇಮಕಾತಿ ಪ್ರಾಧಿಕಾರ ಹೊಂದಿರುತ್ತದೆ.

17 ಭರ್ತಿ ಮಾಡಿರುವ ನಿಗಧಿತ ಅರ್ಜಿ ನಮೂನೆಯೊಂದಿಗೆ ಸ್ವ–ವಿಳಾಸವನ್ನು ಬರೆದಿರುವ ಒಂದು ಅಂಚೆ ಲಕೋಟೆಯನ್ನು ಸಲ್ಲಿಸಬೇಕು.

18 ಅರ್ಜಿಯನ್ನು ಸಲ್ಲಿಸುವ ಲಕೋಟೆಯ ಮೇಲೆ "**ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಗ್ರೂಪ್–ಡಿ ಅಥವಾ ಪೀವನ್ ಹುದ್ದೆಗಾಗಿ ಅರ್ಜಿ**" ಎಂದು ದಪ್ಪ ಅಕ್ಷರಗಳಲ್ಲಿ ಬರೆದಿರಬೇಕು.

19 ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ನಂತರದ ಮೊದಲನೆ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

20 ಮೂರು ನಡತೆ ಪ್ರಮಾಣ ಪತ್ರಗಳುः– ಇವುಗಳಲ್ಲಿ 01 ಅವನು ಅಥವಾ ಅವಳು ಅಂತಿಮವಾಗಿ ಅಭ್ಯಾಸ ಮಾಡಿದ ಶಾಲೆ ಅಥವಾ ಕಾಲೇಜಿನ ಮುಖ್ಯೋಪಾಧ್ಯಾಯರು/ಪ್ರಾಂಶುಪಾಲರಿಂದ ಪಡೆದಿರಬೇಕು. 02 ನಡತೆ ಪ್ರಮಾಣ ಪತ್ರಗಳು ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದಿರುವುಗಳಾಗಿರಬೇಕು.( ಗಣ್ಯ ವ್ಯಕ್ತಿಗಳು ಅಭ್ಯರ್ಥಿಯ ಸಂಬಂಧಿಕರಾಗಿರಬಾರದು)

21 ಈ ಅಧಿಸೂಚನೆಯ ಅನ್ವಯ ನೇಮಕಾತಿಯಾಗಿ ಕಾರ್ಯನಿರ್ವಹಿಸುವ ನೌಕರರಿಗೆ ಎನ್.ಪಿ.ಎಸ್. ಪಿಂಚಣಿ ಸೌಲಭ್ಯ ಅನ್ವಯವಾಗುತ್ತದೆ.

22 ಆಯ್ಕೆಯಾದ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ.

23 ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸುವುದು ಹಾಗೂ ನೈತಿಕ ದುರ್ನಡತೆಯಿಂದಾಗಿ/ನೀತಿಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ/ಕೇಂದ್ರ/ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ/ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ/ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗುತ್ತಾರೆ.

24 ಅರ್ಜಿಯಲ್ಲಿ ತಪ್ಪು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ.

25 ಅರ್ಜಿಯಲ್ಲಿ ನೀಡುವ ವಿಳಾಸವೇ ಅಂತಿಮವಾಗಿದ್ದು ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿ ಕೊಡಲಾಗುವುದು. ನಂತರ ವಿಳಾಸ ಬದಲಾವಣೆ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಪರಿಗಣಿಸಲಾಗುವುದಿಲ್ಲ.

26 ಅಭ್ಯರ್ಥಿಗಳು ನಿಗಧಿತ ಅರ್ಜಿಯಲ್ಲಿ ನಮೂದುಮಾಡುವ ವಿದ್ಯಾರ್ಹತೆ, ಕೋರಿರುವ ಮೀಸಲಾತಿ/ವಿನಾಯತಿ/ನಿರಾಕ್ಷೇಪಣಾ ಪತ್ರ ಇತ್ಯಾದಿ ಸಂಬಂಧಪಟ್ಟ ದಾಖಲೆಗಳ ಒಂದು ಸೆಟ್ ಸ್ವಯಂ ದೃಢೀಕರಿಸಿದ ಪ್ರತಿಯನ್ನು ಮತ್ತು ನಡತೆ ಪ್ರಮಾಣ ಪತ್ರಗಳ ಅಸಲು ಪ್ರತಿಗಳನ್ನು ನಿಗಧಿತ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

27 ಅಭ್ಯರ್ಥಿಗಳು ನಿಗಧಿತ ಅರ್ಜಿಯಲ್ಲಿ ನಮೂದು ಮಾಡುವ ವಿದ್ಯಾರ್ಹತೆ, ಕೋರಿರುವ ಮೀಸಲಾತಿ/ವಿನಾಯತಿ/ನಿರಾಕ್ಷೇಪಣಾ ಪತ್ರ ಇತ್ಯಾದಿ ಸಂಬಂಧಪಟ್ಟ ಮೂಲ ದಾಖಲೆಗಳನ್ನು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗವು ಪರಿಶೀಲನೆಗೆ ಕೋರಿದಾಗ ಕಡ್ಡಾಯವಾಗಿ ಹಾಜರುಪಡಿಸಬೇಕು.

**ನ್ಯಾಯಮೂರ್ತಿ ಬಿ.ಎಸ್.ಇಂದ್ರಕಲಾ**

ಅಧ್ಯಕ್ಷರು,

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು.

**PR. 214**

**SC. 10**

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವಭವನ, ಹೈಗ್ರೌಂಡ್ಸ್, ಬೆಂಗಳೂರು–560001.

## ಅಧಿಸೂಚನೆ

**ಸಂಖ್ಯೆः ಕರಾಆ/ಆಡಳಿತ/97/2015, ದಿನಾಂಕ: 06.08.2015**

**ವಿಷಯः–** ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಬೆರಳಚ್ಚುಗಾರರ ಹುದ್ದೆಗಳ ಆಯ್ಕೆ ಕುರಿತು.

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರಡಿಯಲ್ಲಿ (ಕೇಂದ್ರ ಕಾಯ್ದೆ ಸಂಖ್ಯೆ: 68/1986) ರಚಿತಗೊಂಡು, ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥಪಡಿಸುತ್ತಿರುವ ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ 04 ಬೆರಳಚ್ಚುಗಾರರ ಹುದ್ದೆಗಳಿಗೆ (ಒಟ್ಟು ಖಾಲಿ ಇರುವ 04 ಬೆರಳಚ್ಚುಗಾರರ ಹುದ್ದೆಗಳಲ್ಲಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಹೈದ್ರಾಬಾದ್–ಕರ್ನಾಟಕದ ಸ್ಥಳೀಯ ವೃಂದಕ್ಕೆ ಮೀಸಲಿರಿಸಿದ 01 ಬೆರಳಚ್ಚುಗಾರರ ಹುದ್ದೆ ಸೇರಿರುತ್ತದೆ) ಇದರೊಂದಿಗೆ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ಮುಂದೆ ಓದುವ ಅರ್ಹತೆಯುಳ್ಳ ಅರ್ಜಿದಾರರು ತಮ್ಮ ಸ್ವಂತ ಕೈಬರಹದಲ್ಲಿಯೇ ಭರ್ತಿ ಮಾಡಿದ ಅರ್ಜಿಯನ್ನು **ದಿನಾಂಕ 05 ಸೆಪ್ಟೆಂಬರ್ 2015ರಂದು ಸಂಜೆ: 5–00 ಗಂಟೆಯೊಳಗಾಗಿ** ಅಗತ್ಯ ದಾಖಲೆಗಳೊಂದಿಗೆ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು–560001, ಇವರಿಗೆ ಸಲ್ಲಿಸತಕ್ಕದ್ದು.

1. **ವಯೋಮಿತಿಃ–**

1) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದಿಗೆ ಅಭ್ಯರ್ಥಿಗೆ ಕನಿಷ್ಠ 18 ವರ್ಷ ವಯಸ್ಸಾಗಿರಬೇಕು ಹಾಗೂ ಗರಿಷ್ಠ ವಯೋಮಿತಿ ಈ ಕೆಳಕಂಡಂತೆ ಮೀರಿರಬಾರದು.

| ಕ್ರ. ಸಂ | ಪ್ರವರ್ಗ | ಗರಿಷ್ಠ ವಯೋಮಿತಿ |
|---|---|---|
| 1 | ಸಾಮಾನ್ಯ ಅರ್ಹತೆ | 35 |
| 2 | ಪ್ರವರ್ಗ–2ಎ, 2ಬಿ, 3ಎ, 3ಬಿ | 38 |
| 3 | ಪ.ಜಾ, ಪ.ಪಂ., ಪ್ರವರ್ಗ–1 | 40 |

2) ವಿಧವೆ, ಮಾಜಿ ಸೈನಿಕರಿಗೆ, ಅಂಗವಿಕಲರಿಗೆ, ಸರ್ಕಾರಿ ನೌಕರರಿಗೆ ಹಾಗೂ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ VI ರಡಿಯಲ್ಲಿ ಸೂಚಿಸಿರುವವರಿಗೆ ಗರಿಷ್ಠ ವಯೋಮಿತಿಯಲ್ಲಿ ವಿನಾಯಿತಿ ಇರುತ್ತದೆ.

(ವಯೋಮಿತಿಯಲ್ಲಿ ಮೀಸಲಾತಿ ಕೋರುವ ಸರ್ಕಾರಿ ನೌಕರರು ನೇಮಕಾತಿ ಪ್ರಾಧಿಕಾರಿಗಳಿಂದ ಸೇವಾ ಪ್ರಮಾಣ ಪತ್ರವನ್ನು ಹಾಗೂ ಇತರೆಯವರು ಸಂಬಂಧಪಟ್ಟ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು)

2. **ವಿದ್ಯಾರ್ಹತೆಃ–**

**ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ ಅರ್ಜಿದಾರರು ಈ ಕೆಳಕಂಡ ವಿದ್ಯಾರ್ಹತೆಯನ್ನು ಹೊಂದಿರಬೇಕು.**

(1) ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು

(2) ಕನ್ನಡ ಬೆರಳಚ್ಚು ಪ್ರೌಢದರ್ಜೆಯಲ್ಲಿ ಮತ್ತು ಇಂಗ್ಲೀಷ್ ಬೆರಳಚ್ಚು ಪ್ರೌಢದರ್ಜೆಯಲ್ಲಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

(3) ಕಂಪ್ಯೂಟರ್ ತಿಳುವಳಿಕೆ ಅಗತ್ಯವಿದ್ದು, ಕಂಪ್ಯೂಟರ್ ಜ್ಞಾನದ ಬಗ್ಗೆ ಪ್ರಮಾಣ ಪತ್ರ ಹೊಂದಿರಬೇಕು.

**3. ವೇತನ ಶ್ರೇಣಿಃ– ರೂ.11600-200-12000-250-13000-300-14200-350-15600-400-17200-450-19000-500-21000**

**4. ಅರ್ಜಿ ಶುಲ್ಕಃ–** ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1,ಅಂಗವಿಕಲ ಅಭ್ಯರ್ಥಿಗಳು ಯಾವುದೇ ಶುಲ್ಕವನ್ನು ಭರಿಸಬೇಕಾಗಿಲ್ಲ. ಸಾಮಾನ್ಯ ವರ್ಗದ ಹಾಗೂ ಇನ್ನಿತರೆ ವರ್ಗದ ಅಭ್ಯರ್ಥಿಗಳು ಅರ್ಜಿಯೊಂದಿಗೆ ರೂ.100/–(ಒಂದು ನೂರು ರೂಪಾಯಿ)ರ ಕ್ರಾಸ್ ಮಾಡಿದ ಭಾರತೀಯ ಅಂಚೆ ಆದೇಶ ಪತ್ರವನ್ನು ಬೆಂಗಳೂರು ನಗರದ ಪ್ರಧಾನ ಅಂಚೆ ಕಛೇರಿಯಲ್ಲಿ ನಗಧೀಕರಿಸಲು ಅನುಕೂಲವಾಗುವಂತೆ "ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಬೆಂಗಳೂರು" ಇವರ ಹೆಸರಿನಲ್ಲಿ ಪಡೆದು ಅರ್ಜಿಯೊಂದಿಗೆ ಲಗತ್ತಿಸಿರಬೇಕು. ಶುಲ್ಕವನ್ನು ಪಾವತಿ ಮಾಡಿದ ನಂತರ ಶುಲ್ಕವನ್ನು ಅರ್ಜಿದಾರರಿಗೆ ಹಿಂತಿರುಗಿಸಲಾಗುವುದಿಲ್ಲ.

**5.ಅರ್ಜಿ ಸಲ್ಲಿಸಲು ಕೊನೆಯ ದಿನಾಂಕಃ– 05 ಸೆಪ್ಟೆಂಬರ್ 2015 ಸಂಜೆ 05.00 ಗಂಟೆ ಒಳಗಾಗಿ ಸಲ್ಲಿಸಬೇಕು.**

**6.ಅರ್ಜಿ ನಮೂನೆ ಪಡೆಯುವ ವಿಧಾನಃ–**

ಅರ್ಜಿಗಳನ್ನು ಅಂಚೆ ಮೂಲಕ ಯಾವುದೇ ಅರ್ಜಿದಾರರಿಗೆ ಕಳುಹಿಸಲಾಗುವುದಿಲ್ಲ. ಅರ್ಜಿ ನಮೂನೆಗಳನ್ನು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ವೆಬ್‌ಸೈಟ್ http://kscdrc.kar.nic.in ನಲ್ಲಿ "Application for the post of Typist" ಎಂಬ ಉಪ ಶೀರ್ಷಿಕೆಯಲ್ಲಿ ಪ್ರಕಟಿಸಿದ್ದು, ಅಲ್ಲಿಂದ ಅರ್ಜಿ ನಮೂನೆಗಳನ್ನು ತೆಗೆದುಕೊಂಡು, ಭರ್ತಿ ಮಾಡಿ ಸಲ್ಲಿಸುವುದು.

**7. ಖಾಲಿ ಇರುವ ಸ್ಥಾನಗಳುಃ–**

**ರಾಜ್ಯ ವ್ಯಾಪಿ ಉಳಿಕೆ ವೃಂದದಲ್ಲಿ ಖಾಲಿ ಇರುವ 03 ಬೆರಳಚ್ಚುಗಾರರ ಹುದ್ದೆಗಳ ರಿಕ್ತ ಸ್ಥಾನಗಳು ಈ ಕೆಳಕಂಡಂತಿರುತ್ತವೆ.**

| ಮೀಸಲಾತಿ | ಇತರೆ | ಮಹಿಳೆ | ಗ್ರಾ.ಅ | ಅಂ.ವಿ | ಮಾ.ಸೈ | ಕ.ಮಾ.ಅ | ಯೋ.ನಿ.ಅ | ಒಟ್ಟು |
|---|---|---|---|---|---|---|---|---|
| **ಸಾಮಾನ್ಯ ಅರ್ಹತೆ** | 01 | – | – | – | – | – | – | **01** |
| **ಪರಿಶಿಷ್ಟ ಜಾತಿ** | 01 | – | – | – | – | – | – | **01** |
| **ಪರಿಶಿಷ್ಟ ಪಂಗಡ** | 01 | – | – | – | – | – | – | **01** |
| **ಒಟ್ಟು** | 03 | – | – | – | – | – | – | **03** |

**371(ಜೆ)ರನ್ವಯ ಹೈದ್ರಾಬಾದ್–ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದದಲ್ಲಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಖಾಲಿ ಇರುವ 01 ಹುದ್ದೆಯನ್ನು ಭರ್ತಿ ಮಾಡಲು ರಿಕ್ತ ಸ್ಥಾನ ಈ ಕೆಳಕಂಡಂತಿದೆ.**

| ಮೀಸಲಾತಿ | ಇತರೆ | ಮಹಿಳೆ | ಗ್ರಾ.ಅ | ಅಂ.ವಿ | ಮಾ.ಸೈ | ಕ.ಮಾ.ಅ | ಯೋ.ನಿ.ಅ | ಒಟ್ಟು |
|---|---|---|---|---|---|---|---|---|
| **ಪರಿಶಿಷ್ಟ ಜಾತಿ** | 01 | – | – | – | – | – | – | **01** |
| **ಒಟ್ಟು** | **01** | – | – | – | – | – | – | **01** |

**8. ಅರ್ಹತಾ ಷರತ್ತುಗಳುಃ–**

(ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

(ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

(ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

**9. ಇತರೆ ಅರ್ಹತೆ ಮತ್ತು ಷರತ್ತುಗಳು:–**

1 ಅಭ್ಯರ್ಥಿಗಳು ಕನ್ನಡ ಬೆರಳಚ್ಚು ಪ್ರೌಢದರ್ಜೆ ಮತ್ತು ಇಂಗ್ಲೀಷ್ ಬೆರಳಚ್ಚು ಪ್ರೌಢ ದರ್ಜೆ ಅಥವಾ ತತ್ಸಮಾನ ಇವುಗಳಲ್ಲಿ ಪಡೆದ ಅಂಕಗಳ ಜೊತೆಗೆ ಯೋಗ್ಯತೆ, ಸೂಕ್ತತೆ ಮತ್ತು ನ್ಯಾಯಾಲಯದ ಆವರಣದಲ್ಲಿ ಸಾಕ್ಷಿಗಳ ಹೇಳಿಕೆಯನ್ನು ಬೆರಳಚ್ಚಿಸುವ ಸಾಮರ್ಥ್ಯವನ್ನು ಹೊಂದಿರುವ ಬಗ್ಗೆ ಪರಿಶೀಲಿಸಿ, ಅರ್ಹ ಮತ್ತು ಯೋಗ್ಯರನ್ನು ರಿಕ್ತ ಸ್ಥಾನವಾರು ಆಯ್ಕೆ ಮಾಡಲಾಗುವುದು.

2 ಅರ್ಜಿಯನ್ನು ಸಲ್ಲಿಸುವಾಗ ಜಾತಿ/ವರ್ಗದಡಿಯಲ್ಲಿ ಮೀಸಲಾತಿಯನ್ನು ಕೋರುವವರು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ "ಡಿ" ರಲ್ಲಿ, ಪ್ರವರ್ಗ–1ರ ಅಭ್ಯರ್ಥಿಯು ನಮೂನೆ "ಇ" ರಲ್ಲಿ, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ ಮತ್ತು ಪ್ರವರ್ಗ–3ಬಿ ವರ್ಗದ ಅಭ್ಯರ್ಥಿಗಳು ನಮೂನೆ "ಎಫ್" ರಲ್ಲಿ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರರಿಂದ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಮತ್ತು ಅಂತಹ ಪ್ರಮಾಣ ಪತ್ರವು ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

3 ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ಚಾಲ್ತಿಯಲ್ಲಿರುವ ನಮೂನೆ–2ರಲ್ಲಿನ ಪ್ರಮಾಣ ಪತ್ರದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ಶಾಲೆಯ ಮುಖ್ಯೋಪಾಧ್ಯಾಯರಿಂದ ಮೊಹರಿನೊಂದಿಗೆ ಸಹಿ ಪಡೆದಿರುವ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದು ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೊಹರಿನೊಂದಿಗೆ ಮೇಲು ರುಜುವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಹಾಗೂ ಪ್ರಮಾಣ ಪತ್ರ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

4 ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಯು ಚಾಲ್ತಿಯಲ್ಲಿರುವ ನಮೂನೆ–2ರಲ್ಲಿನ ಪ್ರಮಾಣ ಪತ್ರದಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ಶಾಲೆಯ ಮುಖ್ಯೋಪಾಧ್ಯಾಯರಿಂದ ಮೊಹರಿನೊಂದಿಗೆ ಸಹಿ ಪಡೆದಿರುವ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದು ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೊಹರಿನೊಂದಿಗೆ ಮೇಲು ರುಜುವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಮತ್ತು ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಅವರು ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1ರಲ್ಲಿನ ಪ್ರಮಾಣ ಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಸಂಬಂಧಿಸಿದ ತಹಸೀಲ್ದಾರ್ ರವರಿಂದ ಪಡೆದಿರತಕ್ಕದ್ದು ಹಾಗೂ ಪ್ರಮಾಣ ಪತ್ರ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

5 ಕನ್ನಡ ಮಾಧ್ಯಮ ಮೀಸಲಾತಿ ಕೋರುವ ಅಭ್ಯರ್ಥಿಗಳು 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ಅಭ್ಯರ್ಥಿಯು ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಚಾಲ್ತಿಯಲ್ಲಿರುವ ನಮೂನೆಯಲ್ಲಿ ಶಾಲೆಯ ಮುಖ್ಯೋಪಾಧ್ಯಾಯರಿಂದ ಮೊಹರಿನೊಂದಿಗೆ ಸಹಿ ಇರುವ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಹಾಗೂ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

6 ಯೋಜನಾ ನಿರಾಶ್ರಿತರು, ಅಂಗವಿಕಲ, ಮಾಜಿ ಸೈನಿಕರು, ಹಾಗೂ ಇತರೆ ಮೀಸಲಾತಿಯಡಿ ಮೀಸಲಾತಿ ಕೋರುವವರು ಸಂಬಂಧಪಟ್ಟ ಪ್ರಾಧಿಕಾರದಿಂದ ಪ್ರಮಾಣಪತ್ರವನ್ನು ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ಪಡೆದಿರಬೇಕು ಹಾಗೂ ನಿಯಮಾನುಸಾರ ಚಾಲ್ತಿಯಲ್ಲಿರಬೇಕು.

7 ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು, ಅರ್ಜಿಸಲ್ಲಿಸುವ ಕೊನೆಯ ದಿನಾಂಕದೊಳಗಾಗಿ ನೇಮಕಾತಿ ಪ್ರಾಧಿಕಾರಿಗಳಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಪಡೆದಿರಬೇಕು.

8 ವಯೋಮಿತಿಯಲ್ಲಿ ವಿನಾಯತಿ ಕೋರುವ ಅರ್ಹ ಅಭ್ಯರ್ಥಿಗಳು ಸಂಬಂಧಪಟ್ಟ ಪ್ರಾಧಿಕಾರದಿಂದ ನಿಯಮಾನುಸಾರ ಪ್ರಮಾಣ ಪತ್ರವನ್ನು ಪಡೆದಿರಬೇಕು ಮತ್ತು ಚಾಲ್ತಿಯಲ್ಲಿರಬೇಕು.

9 ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು 2013ಕ್ಕೆ ಸಂಬಂಧಿಸಿದಂತೆ ನೇರ ನೇಮಕಾತಿಯಲ್ಲಿ ಸ್ಥಳೀಯ ಅಭ್ಯರ್ಥಿಯಾಗಿ ಹೈದ್ರಾಬಾದ್–ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದದಲ್ಲಿ ಮೀಸಲಾತಿ ಕೋರುವ ಅಭ್ಯರ್ಥಿಯು ಮೀಸಲಾತಿ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗಾಗಿ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ಪಡೆದುಕೊಂಡಿರಬೇಕು.

10 ಹೈದ್ರಾಬಾದ್–ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದದಲ್ಲಿ ಹಾಗೂ ರಾಜ್ಯ ವ್ಯಾಪಿ ಉಳಿಕೆ ವೃಂದದಲ್ಲಿ ಖಾಲಿ ಇರುವ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅರ್ಹ ಅಭ್ಯರ್ಥಿಗಳು ನಿಗಧಿತ ಒಂದೇ ಅರ್ಜಿ ನಮೂನೆಯಲ್ಲಿ ಅರ್ಜಿ ಸಲ್ಲಿಸತಕ್ಕದ್ದು ಹಾಗೂ ನಿಗಧಿತ ಅರ್ಜಿ ನಮೂನೆಯಲ್ಲಿರುವಂತೆ ಸ್ಪಷ್ಟವಾಗಿ ಆದ್ಯತೆಯನ್ನು ನಮೂದಿಸುವುದು.

11 ಆಯ್ಕೆಯಲ್ಲಿ ಯಾವುದೇ ರೀತಿಯ ಶಿಫಾರಸ್ಸನ್ನು ಸ್ವೀಕರಿಸುವುದಿಲ್ಲ. ಶಿಫಾರಸ್ಸು ಮಾಡಿಸಿದವರ ಅರ್ಜಿಯನ್ನು ಆಯ್ಕೆಗೆ ಪರಿಗಣಿಸುವುದಿಲ್ಲ.

12 ದಿನಾಂಕ 05 ಸೆಪ್ಟೆಂಬರ್ 2015ರ ಸಂಜೆ 5–00 ಗಂಟೆಯ ನಂತರ ಅಂಚೆಯ ಮೂಲಕ/ಕೊರಿಯರ್ ಮೂಲಕ ಅಥವಾ ಖುದ್ದಾಗಿ ಸಲ್ಲಿಸಲ್ಪಡುವ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

13 ಕೊನೆಯ ದಿನಾಂಕದ ನಂತರ ಸ್ವೀಕೃತವಾಗುವ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೆ ತಿರಸ್ಕರಿಸಲಾಗುವುದು.

14 ಅಪೂರ್ಣವಾಗಿ ಭರ್ತಿ ಮಾಡಿರುವ ಹಾಗೂ ಅಪೂರ್ಣವಾಗಿ ದಾಖಲೆಗಳನ್ನು ಸಲ್ಲಿಸಿರುವ ಹಾಗೂ ನಿಗಧಿತ ಅರ್ಜಿ ನಮೂನೆಯಲ್ಲಿ ಸಲ್ಲಿಸದ ಅರ್ಜಿಗಳನ್ನು ಹಾಗೂ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವಂತೆ ಅರ್ಜಿಯೊಂದಿಗೆ ನಿಗಧಿತ ಶುಲ್ಕ ಪಾವತಿ ಮಾಡದೇ ಇರುವ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೆ ತಿರಸ್ಕರಿಸಲಾಗುವುದು.

15 ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯಲ್ಲಿ ಪ್ರಸ್ತುತ ಮಂಜೂರಾಗಿರುವ ಬೆರಳಚ್ಚುಗಾರರ ಹುದ್ದೆಗಳಿಗೆ ಅನುಗುಣವಾಗಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗಕ್ಕೆ ಮಾತ್ರ ಹೈದ್ರಾಬಾದ್–ಕರ್ನಾಟಕದ ಸ್ಥಳೀಯ ವೃಂದಕ್ಕೆ ಹುದ್ದೆಯನ್ನು ಮೀಸಲಿರಿಸಿದ್ದು ಅದರಂತೆ ಹೈದ್ರಾಬಾದ್–ಕರ್ನಾಟಕದ ಮೀಸಲಾತಿಯಡಿಯಲ್ಲಿ ನೇಮಕಾತಿಯಾದ ಅಭ್ಯರ್ಥಿಗೆ ಪ್ರಸ್ತುತ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗಕ್ಕೆ ಸ್ಥಳ ನಿಯೋಜನೆ ಮಾಡಲಾಗುವುದು.

16 ಅಧಿಸೂಚನೆಯಲ್ಲಿರುವ ಹೈದ್ರಾಬಾದ್–ಕರ್ನಾಟಕದ ರಾಜ್ಯ ವ್ಯಾಪಿ ಸ್ಥಳೀಯ ವೃಂದದ ಖಾಲಿ ಹುದ್ದೆ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು ಇಲ್ಲಿ ಹೈದ್ರಾಬಾದ್–ಕರ್ನಾಟಕದವರಿಗೆ ಮೀಸಲಿರಿಸಿದ ಹುದ್ದೆಗೆ ಅನ್ವಯಿಸುತ್ತವೆ ಹಾಗೂ ರಾಜ್ಯ ವ್ಯಾಪಿ ಉಳಿಕೆ ವೃಂದದ ಖಾಲಿ ಹುದ್ದೆಗಳು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಹೈದ್ರಾಬಾದ್–ಕರ್ನಾಟಕದವರಿಗೆ ಮೀಸಲಿರಿಸಿದ ಹುದ್ದೆಯನ್ನು ಹೊರತುಪಡಿಸಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಮತ್ತು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆ ಅನ್ವಯಿಸುತ್ತವೆ.

17 ಆಯ್ಕೆ ಪ್ರಕ್ರಿಯೆಯಲ್ಲಿ ಹುದ್ದೆಗಳ ಸಂಖ್ಯೆಯನ್ನು ಕಡಿಮೆ ಮಾಡುವ ಅಥವಾ ಹೆಚ್ಚಿಸುವ ಅಧಿಕಾರವನ್ನು ನೇಮಕಾತಿ ಪ್ರಾಧಿಕಾರ ಹೊಂದಿರುತ್ತದೆ.

18 ಭರ್ತಿ ಮಾಡಿರುವ ನಿಗಧಿತ ಅರ್ಜಿ ನಮೂನೆಯೊಂದಿಗೆ ಸ್ವ–ವಿಳಾಸವನ್ನು ಬರೆದಿರುವ ಒಂದು ಅಂಚೆ ಲಕೋಟೆಯನ್ನು ಸಲ್ಲಿಸಬೇಕು.

19 ಅರ್ಜಿಯನ್ನು ಸಲ್ಲಿಸುವ ಲಕೋಟೆಯ ಮೇಲೆ **"ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಬೆರಳಚ್ಚುಗಾರರ ಹುದ್ದೆಗಾಗಿ ಅರ್ಜಿ"** ಎಂದು ದಪ್ಪ ಅಕ್ಷರಗಳಲ್ಲಿ ಬರೆದಿರಬೇಕು.

20 ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ನಂತರದ ಮೊದಲನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

21 ಮೂರು ನಡತೆ ಪ್ರಮಾಣ ಪತ್ರಗಳು ಇವುಗಳಲ್ಲಿ 01 ಅವನು ಅಥವಾ ಅವಳು ಅಂತಿಮವಾಗಿ ಅಭ್ಯಾಸ ಮಾಡಿದ ಶಾಲೆ ಅಥವಾ ಕಾಲೇಜಿನ ಮುಖ್ಯೋಪಾಧ್ಯಾಯರು/ಪ್ರಾಂಶುಪಾಲರಿಂದ ಪಡೆದಿರಬೇಕು ಇನ್ನುಳಿದ 02 ನಡತೆ ಪ್ರಮಾಣ ಪತ್ರಗಳನ್ನು ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದಿರುವುಗಳಾಗಿರಬೇಕು.( ಗಣ್ಯ ವ್ಯಕ್ತಿಗಳು ಅಭ್ಯರ್ಥಿಯ ಸಂಬಂಧಿಕರಾಗಿರಬಾರದು) ನಿಗಧಿತ ಅರ್ಜಿಯೊಂದಿಗೆ ಸಲ್ಲಿಸಬೇಕು.

22 ಈ ಅಧಿಸೂಚನೆಯ ಅನ್ವಯ ನೇಮಕಾತಿಯಾಗಿ ಕಾರ್ಯನಿರ್ವಹಿಸುವ ನೌಕರರಿಗೆ ಎನ್.ಪಿ.ಎಸ್. ಪಿಂಚಣಿ ಸೌಲಭ್ಯ ಅನ್ವಯವಾಗುತ್ತದೆ.

23 ಆಯ್ಕೆಯಾದ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ ಹಾಗೂ ಪರಿವೀಕ್ಷಣಾ ಅವಧಿಯಲ್ಲಿ ನಿಗಧಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

24 ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸುವುದು ಹಾಗೂ ನೈತಿಕ ದುರ್ನಡತೆಯಿಂದಾಗಿ/ನೀತಿಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ/ಕೇಂದ್ರ/ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ/ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ/ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗುತ್ತಾರೆ.

25 ಅರ್ಜಿಯಲ್ಲಿ ತಪ್ಪು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ.

26 ಅರ್ಜಿಯಲ್ಲಿ ನೀಡುವ ವಿಳಾಸವೇ ಅಂತಿಮವಾಗಿದ್ದು ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿ ಕೊಡಲಾಗುವುದು. ನಂತರ ವಿಳಾಸ ಬದಲಾವಣೆ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಪರಿಗಣಿಸಲಾಗುವುದಿಲ್ಲ.

27 ಅಭ್ಯರ್ಥಿಗಳು ನಿಗಧಿತ ಅರ್ಜಿಯಲ್ಲಿ ನಮೂದುಮಾಡುವ ವಿದ್ಯಾರ್ಹತೆ, ಕೋರಿರುವ ಮೀಸಲಾತಿ/ವಿನಾಯತಿ/ನಿರಾಕ್ಷೇಪಣಾ ಪತ್ರ ಇತ್ಯಾದಿ ಸಂಬಂಧಪಟ್ಟ ದಾಖಲೆಗಳ ಒಂದು ಸೆಟ್ ಸ್ವಯಂ ದೃಢೀಕರಿಸಿದ ಪ್ರತಿಯನ್ನು ಮತ್ತು ನಡತೆ ಪ್ರಮಾಣ ಪತ್ರಗಳ ಅಸಲು ಪ್ರತಿಗಳನ್ನು ನಿಗಧಿತ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

28 ಅಭ್ಯರ್ಥಿಗಳು ನಿಗಧಿತ ಅರ್ಜಿಯಲ್ಲಿ ನಮೂದು ಮಾಡುವ ವಿದ್ಯಾರ್ಹತೆ, ಕೋರಿರುವ ಮೀಸಲಾತಿ/ವಿನಾಯತಿ/ನಿರಾಕ್ಷೇಪಣಾ ಪತ್ರ ಇತ್ಯಾದಿ ಸಂಬಂಧಪಟ್ಟ ಮೂಲ ದಾಖಲೆಗಳನ್ನು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗವು ಪರಿಶೀಲನೆಗೆ ಕೋರಿದಾಗ ಕಡ್ಡಾಯವಾಗಿ ಹಾಜರುಪಡಿಸಬೇಕು.

**ನ್ಯಾಯಮೂರ್ತಿ ಬಿ.ಎಸ್.ಇಂದ್ರಕಲಾ**

ಅಧ್ಯಕ್ಷರು,

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು.

**PR. 215**

**SC. 10**

## ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ

**ನೇಮಕಾತಿ ಅಧಿಸೂಚನೆ ಸಂಖ್ಯೆ : 02/2015, ದಿನಾಂಕ: 15/07/2015.**

**ವಿಷಯ:** ಬೆರಳಚ್ಚುಗಾರ ಮತ್ತು ಬೆರಳಚ್ಚು–ನಕಲುಗಾರ ಹುದ್ದೆಗಳ ನೇರ ನೇಮಕಾತಿ ಮಾಡಲು ಅಧಿಸೂಚನೆ ಹೊರಡಿಸುವ ಕುರಿತು.

**ಉಲ್ಲೇಖ:** 1. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಎಸಿ–2 164/2009, ದಿನಾಂಕ: 18–03–2010.

2. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಎಸಿ–2 54/2011, ದಿನಾಂಕ: 01–10–2011.

3. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಎಸಿ–2 128/2012, ದಿನಾಂಕ: 14–09–2012.

4. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: ಎಲ್‌ಎಸಿ–2 128/2012, ದಿನಾಂಕ: 21–01–2013.

ಹಾವೇರಿ ಜಿಲ್ಲೆಯ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ **"ಬೆರಳಚ್ಚುಗಾರ ಮತ್ತು ಬೆರಳಚ್ಚು–ನಕಲುಗಾರ"** ಹುದ್ದೆಗಳಿಗೆ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿದ್ದು, ಇಚ್ಛೆಯುಳ್ಳ ಅಭ್ಯರ್ಥಿಗಳು ಅರ್ಜಿಯ ಎಲ್ಲ ಅಂಕಣಗಳನ್ನು ಭರ್ತಿ ಮಾಡಿ ಅರ್ಜಿಯ ಜೊತೆಗೆ ದಾಖಲಾತಿಗಳ ಸ್ವಯಂ ದೃಢೀಕೃತ ನಕಲು ಪ್ರತಿಗಳನ್ನು ಲಗತ್ತಿಸಿ, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ, ಈ ವಿಳಾಸಕ್ಕೆ ನಿಗದಿತ ಅವಧಿಯೊಳಗಾಗಿ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 31–08–2015. ಸಾಯಂಕಾಲ 05–45 ಗಂಟೆಯವರೆಗೆ**

- **ಬೆರಳಚ್ಚುಗಾರ – 12 ಹುದ್ದೆಗಳು**
- **ವರ್ಗೀಕರಣ:–**

| ಮೀಸಲಾತಿ | ರೋಸ್ಟರ್ ಬಿಂದು | | ವರ್ಗೀಕರಣ | | | | | | | |
|---|---|---|---|---|---|---|---|---|---|---|
| | ನೇರ ಮೀಸಲಾತಿ | ಸಮತಳ ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಅಂಗವಿಕಲ | ಮಾಜಿ ಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತ | ಒಟ್ಟು |
| ಸಾಮಾನ್ಯ ಅಭ್ಯರ್ಥಿ | 56, 58, 60, 62, 64, 66 | 08, 09, 10, 11, 12, 13 | 01 | 02 | 02 | – | 01 | – | – | **06** |
| ಪರಿಶಿಷ್ಟ ಜಾತಿ | 59 | 10 | – | – | – | – | 01 | – | – | **01** |
| ಪರಿಶಿಷ್ಟ ಪಂಗಡ | – | – | – | – | – | – | – | – | – | – |
| ಪ್ರವರ್ಗ–1 | 57 | 03 | – | – | 01 | – | – | – | – | **01** |
| ಪ್ರವರ್ಗ–2ಎ | 55, 63 | 09, 10 | – | – | 01 | – | 01 | – | – | **02** |
| ಪ್ರವರ್ಗ–2ಬಿ | 61 | 03 | – | – | 01 | – | – | – | – | **01** |
| ಪ್ರವರ್ಗ–3ಎ | – | – | – | – | – | – | – | – | – | – |
| ಪ್ರವರ್ಗ–3ಬಿ | 65 | 03 | – | – | 01 | – | – | – | – | **01** |
| ಒಟ್ಟು | | | **01** | **02** | **06** | – | **03** | – | – | **12** |

- **ವೇತನ ಶ್ರೇಣಿ**

  11600–200–12000–250–13000–300–14200–350–15600–400–17200–450–19000–500–21000/– ಮತ್ತು ಇತರೆ ಭತ್ಯೆಗಳು

- **ಶೈಕ್ಷಣಿಕ ವಿದ್ಯಾರ್ಹತೆ:–**

  1. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.
  2. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಹಿರಿಯ ದರ್ಜೆಯ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.
  3. ಗಣಕಯಂತ್ರದ ಜ್ಞಾನ ಹೊಂದಿರಬೇಕು.

- **ಬೆರಳಚ್ಚು–ನಕಲುಗಾರ – 10 ಹುದ್ದೆಗಳು**
- **ವರ್ಗೀಕರಣ:–**

| ಮೀಸಲಾತಿ | ರೋಸ್ಟರ್ ಬಿಂದು | | ವರ್ಗೀಕರಣ | | | | | | | |
|---|---|---|---|---|---|---|---|---|---|---|
| | ನೇರ ಮೀಸಲಾತಿ | ಸಮತಳ ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಅಂಗವಿಕಲ | ಮಾಜಿ ಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತ | ಒಟ್ಟು |
| ಸಾಮಾನ್ಯ ಅಭ್ಯರ್ಥಿ | 26, 28, 30, 32, 34 | 13, 14, 15, 16, 17 | – | 01 | 02 | – | – | 01 | 01 | **05** |
| ಪರಿಶಿಷ್ಟ ಜಾತಿ | 27, 33 | 05, 06 | – | 01 | 01 | – | – | – | – | **02** |

| | | | | | | | | | | |
|---|---|---|---|---|---|---|---|---|---|---|
| ಪರಿಶಿಷ್ಟ ಪಂಗಡ | – | – | – | – | – | – | – | – | – | – |
| ಪ್ರವರ್ಗ–1 | 31 | 02 | – | 01 | – | – | – | – | – | **01** |
| ಪ್ರವರ್ಗ–2ಎ | 29 | 05 | – | 01 | – | – | – | – | – | **01** |
| ಪ್ರವರ್ಗ–2ಬಿ | 35 | 02 | – | 01 | – | – | – | – | – | **01** |
| ಪ್ರವರ್ಗ–3ಎ | – | – | – | – | – | – | – | – | – | – |
| ಪ್ರವರ್ಗ–3ಬಿ | – | – | – | – | – | – | – | – | – | – |
| **ಒಟ್ಟು** | | | – | **05** | **03** | – | – | **01** | **01** | **10** |

- **ವೇತನ ಶ್ರೇಣಿ**

  11600–200–12000–250–13000–300–14200–350–15600–400–17200–450–19000–500–21000/– ಮತ್ತು ಇತರೆ ಭತ್ಯೆಗಳು

- **ಶೈಕ್ಷಣಿಕ ವಿದ್ಯಾರ್ಹತೆ:–**

  1. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.
  2. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕಿರಿಯ ದರ್ಜೆಯ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.
  3. ಗಣಕಯಂತ್ರದ ಜ್ಞಾನ ಹೊಂದಿರಬೇಕು.

- **ವಯೋಮಿತಿ:–**

  ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಈ ಕೆಳಕಂಡ ವಯೋಮಿತಿಯನ್ನು ಹೊಂದಿರತಕ್ಕದ್ದು.

  1. ಕನಿಷ್ಟ ವಯೋಮಿತಿ 18 ವರ್ಷ,
  2. ಗರಿಷ್ಠ ವಯೋಮಿತಿ – ಸಾಮಾನ್ಯ ವರ್ಗ – 35 ವರ್ಷ,

     – ಪ್ರವರ್ಗ 2ಎ, 2ಬಿ, 3ಎ, 3ಬಿ– 38 ವರ್ಷ,

     – ಪರಿಶಿಷ್ಟ ಜಾತಿ, ಪರಿಶಿಷ್ಟ, ಪಂಗಡ ಪ್ರವರ್ಗ–I –40 ವರ್ಷ.
  3. ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಮತ್ತು ಅಂಗವಿಕಲರಿಗೆ ನಿಯಮಗಳ ಅನುಸಾರ ವಯೋಮಿತಿಯಲ್ಲಿ ಸಡಲಿಕೆ ನೀಡಲಾಗುವುದು.

- **ಆಯ್ಕೆ ವಿಧಾನ:–**

  1. ಅಭ್ಯರ್ಥಿಗಳ ಆಯ್ಕೆಯನ್ನು ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982 ಮತ್ತು ತಿದ್ದುಪಡಿ ನಿಯಮಗಳು 2007 ರಂತೆ ಮಾಡಲಾಗುವುದು.

  2. ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು 15 ನಿಮಿಷಗಳ ಉಕ್ತಲೇಖನದಲ್ಲಿ ಕೊಡುವ ವಿಷಯವನ್ನು ಬೆರಳಚ್ಚು ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು. ಒಂದು ಹುದ್ದೆಗೆ ಅನುಪಾತ 1:5 ರಂತೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.

  **ಟಿಪ್ಪಣಿ:** ಅರ್ಹತಾ ಪರೀಕ್ಷೆಯು ಆಂಗ್ಲ ಮತ್ತು ಕನ್ನಡ ಭಾಷೆ ಎರಡರಲ್ಲಿಯೂ ಗರಿಷ್ಠ 100 ಅಂಕಗಳನ್ನೊಳಗೊಂಡಿದ್ದು ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ ತಲಾ 50 ಅಂಕಗಳನ್ನು ಎರಡರಲ್ಲಿಯೂ ಪಡೆಯಬೇಕು.

- **ಪರಿವೀಕ್ಷಣಾ ಅವಧಿ**

  ಆಯ್ಕೆಯಾದ ಅಭ್ಯರ್ಥಿಗಳು ನೇಮಕಾತಿ ನಿಯಮಗಳಂತೆ ಎರಡು ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯನ್ನು ಪೂರೈಸಬೇಕಾಗುವುದು ಮತ್ತು ನಿರ್ದಿಷ್ಟ ಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕಾಗುವುದು.

- **ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ:**

  ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

- **ಅರ್ಜಿ ಸಲ್ಲಿಸುವ ವಿಧಾನ:**

  ಈ ಪ್ರಕಟಣೆಯಲ್ಲಿ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿ / ಕಂಪ್ಯೂಟರ್ ಮೂಲಕ ತಯಾರಿಸಿ ತಮಗೆ ಅನ್ವಯಿಸುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡುವುದು, ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅರ್ಜಿಯ ಮೇಲೆ ಅಂಟಿಸಿ ಅದರ ಮೇಲೆ ಸಹಿ ಮಾಡುವುದು ಹಾಗೂ ಹುದ್ದೆಗೆ ಸಂಬಂಧಿಸಿದ ವಿದ್ಯಾರ್ಹತೆ, ವಯಸ್ಸು ಮತ್ತು ಕೋರಿರುವ ಮೀಸಲಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ಅಧಿಕೃತ ಅಧಿಕಾರಿಗಳಿಂದ ಪಡೆದು ಅವುಗಳ ನಕಲುಗಳನ್ನು ಸ್ವಯಂ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಿ ಅರ್ಜಿಯನ್ನು **ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ** ಇವರಿಗೆ ದಿನಾಂಕ: **31–08–2015**ರ ಸಂಜೆ **5–45**

  ಗಂಟೆಯೊಳಗೆ ತಲುಪುವಂತೆ ಕಳುಹಿಸಬೇಕು. ಅರ್ಜಿಯನ್ನು ಕಳುಹಿಸುವ ಲಕೋಟೆ ಮೇಲೆ ಅಭ್ಯರ್ಥಿಯು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಾನೆ ಎಂಬುದರ ಬಗ್ಗೆ ಹುದ್ದೆಯ ಹೆಸರನ್ನು ನಮೂದಿಸಬೇಕು.

- **ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲಾತಿಗಳು:**

ಅಭ್ಯರ್ಥಿಗಳು ಈ ಕೆಳಕಂಡ ದಾಖಲಾತಿಗಳ ಸ್ವಯಂ ದೃಢೀಕರಿಸಿದ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು

1. ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ.
2. ಜನ್ಮ ದಿನಾಂಕವನ್ನು ದೃಢೀಕರಿಸಲು ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ ಅಥವಾ ವರ್ಗಾವಣೆ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ದಾಖಲೆಯನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.
3. ವಿದ್ಯಾರ್ಹತೆಯ ಬಗ್ಗೆ ಅಂಕಪಟ್ಟಿಗಳು.
4. ಮೀಸಲಾತಿಯನ್ನು ಕೋರಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಸರಕಾರದಿಂದ ನಿಗದಿಪಡಿಸಿದ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಪಡೆದ ಹಾಗೂ ಚಾಲ್ತಿಯಲ್ಲಿರುವ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ದಾಖಲೆಗಳನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.
5. ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗಿರುವ ಹಾಗೂ ಅರ್ಜಿದಾರರಿಗೆ ಸಂಬಂಧಿಕರಲ್ಲದ ಇಬ್ಬರು ಗಣ್ಯ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
6. ಅರ್ಜಿಯ ಜೊತೆ ಅಭ್ಯರ್ಥಿಯು ಅಭ್ಯಸಿಸಿದ ಶಾಲೆ / ವಿದ್ಯಾಲಯದಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.
7. ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಹಾಗೂ ಸೇವಾ ಪ್ರಮಾಣ ಪತ್ರವನ್ನು ಪಡೆದುಕೊಂಡು, ಅರ್ಜಿಯ ಜೊತೆಗೆ ಲಗತ್ತಿಸಿ, ಆ ಅರ್ಜಿಯನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸತಕ್ಕದ್ದು.
8. ಸ್ವ-ವಿಳಾಸವಿರುವ ಮತ್ತು 5 ರೂಪಾಯಿಗಳ ಅಂಚೆ ಚೀಟಿಯನ್ನು ಲಗತ್ತಿಸಿದ ಲಕೋಟೆಯೊಂದಿಗೆ ಸಲ್ಲಿಸಕ್ಕದ್ದು.
9. ಅಭ್ಯರ್ಥಿಗಳು ತಮ್ಮ ಮೊಬೈಲ್ ದೂರವಾಣಿ ಸಂಖ್ಯೆ ಹಾಗೂ ಈ-ಮೇಲ್ ಐಡಿ ಇದ್ದಲ್ಲಿ ಅದನ್ನು ಅರ್ಜಿಯಲ್ಲಿ ನಮೂದಿಸತಕ್ಕದ್ದು.
10. ಅಭ್ಯರ್ಥಿಗಳು ಲಕೋಟೆಯ ಮೇಲೆ **"ಬೆರಳಚ್ಚುಗಾರ / ಬೆರಳಚ್ಚು-ನಕಲುಗಾರ** ಹುದ್ದೆಗೆ**"** ಎಂದು ಕಡ್ಡಾಯವಾಗಿ ನಮೂದಿಸತಕ್ಕದ್ದು.

- **ವಿಶೇಷ ಸೂಚನೆಗಳು:-**

1. ಅರ್ಜಿಯೊಂದಿಗೆ ಲಗತ್ತಿಸಿರುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದು ಲಗತ್ತಿಸಿರಬೇಕು. ಇಲ್ಲವೇ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು.
2. ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
3. ಒಬ್ಬ ಅಭ್ಯರ್ಥಿಯು ಎರಡೂ ಹುದ್ದೆಗಳಿಗೆ ಅರ್ಜಿ ಸಲ್ಲಿಸಬೇಕಾದಲ್ಲಿ ಒಂದೊಂದು ಹುದ್ದೆಗೂ ಪ್ರತ್ಯೇಕವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.
4. ಯಾವುದೇ ಅಭ್ಯರ್ಥಿಯು ಸರ್ಕಾರಿ ಃ ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿಕೆಯ ಬಗ್ಗೆ ಪ್ರಭಾವ ಬೀರಿದಲ್ಲಿ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅನರ್ಹರಾಗುವುದಿಲ್ಲ.
5. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವಜನಿಕ ರಜೆ ಎಂದು ಘೋಷಿಸಿದ ಪಕ್ಷದಲ್ಲಿ ಮುಂದಿನ ಕಚೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ಪರಿಗಣಿಸಲಾಗುವುದು.
6. ಯಾವುದೇ ಅಭ್ಯರ್ಥಿಗೆ ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯತಕ್ಕದ್ದು ಮತ್ತು ಆ ಬಗ್ಗೆ ಯಾವುದೇ ಪತ್ರ ವ್ಯವಹಾರ ಮಾಡಲಾಗುವುದಿಲ್ಲ.
7. ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿದ ವರ್ಗೀಕರಣಕ್ಕನುಸಾರವಾಗಿ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗದ ಅರ್ಹ ಇತರ ಅಭ್ಯರ್ಥಿಗಳನ್ನು ಭರ್ತಿ ಮಾಡಿಕೊಳ್ಳಲಾಗುವುದು.
8. ಅರ್ಹತಾ ಪರೀಕ್ಷೆ ಮತ್ತು ಸಂದರ್ಶನಕ್ಕಾಗಿ ಆಹ್ವಾನಿಸಿದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

**ವಿ. ಶ್ರೀಶಾನಂದ**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ

**ಅರ್ಜಿ ನಮೂನೆ**

ಸ್ವದೃಢೀಕರಿಸಿದ
ಪಾಸ್‌ಪೋರ್ಟ್
ಅಳತೆಯ
ಭಾವಚಿತ್ರವನ್ನು
ಅಂಟಿಸಬೇಕು

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,

ಹಾವೇರಿ – ಇವರಿಗೆ

ಮಾನ್ಯರೇ,

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಧಿಸೂಚನೆ ಸಂಖ್ಯೆಃ 02/2015 ದಿನಾಂಕಃ 15/07/2015 ರ ಪ್ರಕಾರ ನಾನು ಕೆಳಕಂಡ ಮಾಹಿತಿಗಳೊಂದಿಗೆ **ಬೆರಳಚ್ಚುಗಾರ / ಬೆರಳಚ್ಚು-ನಕಲುಗಾರ** ಹುದ್ದೆಗೆ ಈ ಮೂಲಕ ನನ್ನ ವಿವರಗಳೊಂದಿಗೆ ಅರ್ಜಿ ಸಲ್ಲಿಸುತ್ತಿದ್ದೇನೆ.

<table>
<tr><td>01</td><td>ಅಭ್ಯರ್ಥಿಯ ಹೆಸರು<br>(ದಪ್ಪ ಅಕ್ಷರಗಳಲ್ಲಿ)</td><td colspan="12"></td></tr>
<tr><td>02</td><td>ತಂದೆ / ಗಂಡನ ಹೆಸರು</td><td colspan="12"></td></tr>
<tr><td>03</td><td>ತಾಯಿಯ ಹೆಸರು</td><td colspan="12"></td></tr>
<tr><td>04</td><td>ಜನ್ಮ ದಿನಾಂಕ</td><td colspan="12"></td></tr>
<tr><td rowspan="2">05</td><td>ವಯಸ್ಸು</td><td colspan="4">ವರ್ಷಗಳು</td><td colspan="4">ತಿಂಗಳುಗಳು</td><td colspan="4">ದಿನಗಳು</td></tr>
<tr><td>(ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು)</td><td colspan="4"></td><td colspan="4"></td><td colspan="4"></td></tr>
<tr><td>06</td><td>ಅಭ್ಯರ್ಥಿಯ ಖಾಯಂ ವಿಳಾಸ ಮತ್ತು ಮೊಬೈಲ್ ನಂ ಮತ್ತು ಈ–ಮೇಲ್ ಐಡಿ</td><td colspan="12"></td></tr>
<tr><td>07</td><td>ಲಿಂಗ</td><td colspan="12">ಪುರುಷ / ಮಹಿಳೆ</td></tr>
<tr><td>08</td><td>ರಾಷ್ಟ್ರೀಯತೆ ಮತ್ತು ಧರ್ಮ</td><td colspan="12"></td></tr>
<tr><td>09</td><td>ಜಾತಿ / ಉಪಜಾತಿ</td><td colspan="12"></td></tr>
<tr><td>10</td><td>ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೆ?</td><td colspan="12"></td></tr>
<tr><td>11</td><td>ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರೋ?</td><td colspan="12"></td></tr>
<tr><td>12</td><td>ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರೂ ಸೇವೆಯಿಂದ ವಜಾ ಆಗಿದ್ದೀರ ಅಥವಾ ತೆಗೆದು ಹಾಕಲ್ಪಟ್ಟಿದ್ದೀರಾ?</td><td colspan="12"></td></tr>
<tr><td>13</td><td>ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ? (ಸರ್ಕಾರಿ ಸೇವೆಯಲ್ಲಿದ್ದಲ್ಲಿ, ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣಾ ಪತ್ರದ ಪ್ರತಿಯನ್ನು ಕಡ್ಡಾಯವಾಗಿ ಲಗತ್ತಿಸಬೇಕು)</td><td colspan="6">ಹೌದು ( )</td><td colspan="6">ಇಲ್ಲ ( )</td></tr>
<tr><td rowspan="4">14</td><td>ಕೋರುವ ಮೀಸಲಾತಿಗಳು</td><td colspan="3">ಸಾಮಾನ್ಯ</td><td colspan="3">ಪ. ಜಾತಿ</td><td colspan="3">ಪ.ಪಂಗಡ</td><td colspan="3">ಪ್ರವರ್ಗ–1</td></tr>
<tr><td rowspan="3">(ಕೋರುವ ಮೀಸಲಾತಿಯನ್ನು ✓ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು)</td><td colspan="3"></td><td colspan="3"></td><td colspan="3"></td><td colspan="3"></td></tr>
<tr><td colspan="3">2–ಎ</td><td colspan="3">2–ಬಿ</td><td colspan="3">3–ಎ</td><td colspan="3">3–ಬಿ</td></tr>
<tr><td colspan="3"></td><td colspan="3"></td><td colspan="3"></td><td colspan="3"></td></tr>
<tr><td rowspan="2">15</td><td rowspan="2">ನೀವು ಈ ಯಾವುದಾದರೂ ಮೀಸಲಾತಿ ಅಡಿಯಲ್ಲಿ ಬರುತ್ತೀರ?<br>(ಸೇರುವ ಮೀಸಲಾತಿಯನ್ನು ✓ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು)</td><td colspan="2">ಗ್ರಾಮೀಣ</td><td colspan="3">ಕ.ಮಾ.ಅ</td><td colspan="3">ಮಾ.ಸೈ</td><td colspan="2">ಅಂ. ಅ</td><td colspan="2">ಯೋ.ನಿ.ಅ</td></tr>
<tr><td colspan="2"></td><td colspan="3"></td><td colspan="3"></td><td colspan="2"></td><td colspan="2"></td></tr>
<tr><td rowspan="6">16</td><td>ಶೈಕ್ಷಣಿಕ ವಿದ್ಯಾರ್ಹತೆ<br>(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು)</td><td colspan="3">ಉತ್ತೀರ್ಣ ಹೊಂದಿದ ವರ್ಷ</td><td colspan="3">ಗರಿಷ್ಠ ಅಂಕಗಳು</td><td colspan="3">ಗಳಿಸಿದ ಅಂಕಗಳು</td><td colspan="3">ಶೇಕಡಾವಾರು ಅಂಕಗಳು</td></tr>
<tr><td>ಎಸ್‌ಎಸ್‌ಎಲ್‌ಸಿ</td><td colspan="3"></td><td colspan="3"></td><td colspan="3"></td><td colspan="3"></td></tr>
<tr><td>ಕನ್ನಡ ಬೆರಳಚ್ಚು (ಕಿರಿಯ ಶ್ರೇಣಿ)</td><td colspan="3"></td><td colspan="3"></td><td colspan="3"></td><td colspan="3"></td></tr>
<tr><td>ಆಂಗ್ಲ ಬೆರಳಚ್ಚು (ಕಿರಿಯ ಶ್ರೇಣಿ)</td><td colspan="3"></td><td colspan="3"></td><td colspan="3"></td><td colspan="3"></td></tr>
<tr><td>ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ)</td><td colspan="3"></td><td colspan="3"></td><td colspan="3"></td><td colspan="3"></td></tr>
<tr><td>ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ)</td><td colspan="3"></td><td colspan="3"></td><td colspan="3"></td><td colspan="3"></td></tr>
</table>

ಸೂಚನೆಃ ಅಭ್ಯರ್ಥಿಗಳು ಎಲ್ಲಾ ಕಾಲಂಗಳನ್ನು ಖಡ್ಡಾಯವಾಗಿ ಭರ್ತಿ ಮಾಡತಕ್ಕದ್ದು.

: ಘೋಷಣೆ :

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ಸತ್ಯವಾಗಿದ್ದು ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ತಾವು ತೆಗೆದುಕೊಳ್ಳುವ ತೀರ್ಮಾನಗಳಿಗೆ ಬದ್ಧನಾಗಿರುತ್ತೇನೆ / ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡಲ್ಲಿ ಹಾವೇರಿ ಜಿಲ್ಲೆಯ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿರುತ್ತೇನೆ / ಸಿದ್ಧಳಿರುತ್ತೇನೆ.

ಸ್ಥಳಃ ಅಭ್ಯರ್ಥಿಯ ಸಹಿ

ದಿನಾಂಕಃ

PR. 206
SC. 10

**ಕರ್ನಾಟಕ ಸರ್ಕಾರ**

**ಸಾರ್ವಜನಿಕ ಗ್ರಂಥಾಲಯ ಇಲಾಖೆ**

**ನಿರ್ದೇಶಕರವರ ಕಛೇರಿ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, 4ನೇ ಮಹಡಿ, ಡಾಃಅಂಬೇಡ್ಕರ್ ವೀಧಿ, ಬೆಂಗಳೂರು 560 001**

**: ತಿದ್ದುಪಡಿ ಅಧಿಸೂಚನೆ :**

**ಸಂಃಸಾಗ್ರಂಇಃನಿಕಃಎ4ಃ371(ಜೆ):ಡಿ.ವೃ.ನೇ/01/2015-16, ದಿನಾಂಕಃ 14-07-2015**

**ವಿಷಯ :** ಹೈದ್ರಾಬಾದ್-ಕರ್ನಾಟಕ ಪ್ರದೇಶದ 371(ಜೆ) ತಿದ್ದುಪಡಿ ಕಲಂ ಅನ್ವಯ ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿನ ಖಾಲಿ ಇರುವ ಗ್ರೂಪ್ "ಡಿ" ವೃಂದದ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ ತಿದ್ದುಪಡಿ ಅಧಿಸೂಚನೆಯನ್ನು ಹೊರಡಿಸುವ ಕುರಿತು-

**ಉಲ್ಲೇಖ:**
1) ಸರ್ಕಾರಿ ಅಧಿಸೂಚನೆ ಸಂ. ಡಿಪಿಎಆರ್ 06 ಪಿಎಲ್ಎಕ್ಸ್ 2012 ದಿನಾಂಕ 6-11-2013.
2) ಸರ್ಕಾರಿ ಅಧಿಸೂಚನೆ ಸಂ. ಡಿಪಿಎಆರ್ 43 ಹೆಚ್‌ಕೆಸಿ 2013 ದಿನಾಂಕ 29-1-2014.
3) ಈ ಕಛೇರಿಯ ಅಧಿಸೂಚನೆ ಸಂ. ಸಾಗ್ರಂಇ/ನಿಕ/ಎ4/05/ಹೈ.ಕ.ಹು.ಭ/ 2014-15 ದಿನಾಂಕ 7-5-2015.
4) ಸರ್ಕಾರದ ಸುತ್ತೋಲೆ ಸಂ. ಡಿಪಿಎಆರ್ 43 ಹೆಚ್‌ಕೆಸಿ 2013 (ಪಿ-1), ಬೆಂಗಳೂರು ದಿನಾಂಕ 17-06-2014
5) ಜಂಟಿ ಕಾರ್ಯದರ್ಶಿ, ಹೈ-ಕ. ವಿಶೇಷ ಕೋಶ ಇವರ ಅಧಿಕೃತ ಜ್ಞಾಪನ ಪತ್ರ ಸಂ. ಸಿಆಸುಇ 33 ಹೈಕಉ 2014, ಬೆಂಗಳೂರು ದಿಃ 10-4-2014.
6) ಈ ಕಛೇರಿಯ ಅಧಿಸೂಚನೆ ಸಂ.ಸಾಗ್ರಂಇ/ನಿಕ/ಎ4/371(ಜೆ)/ಡಿ.ವೃ.ನೇ/01/ 2015-16 ದಿನಾಂಕ 15-06-2015.

ಉಲ್ಲೇಖಿತ ಸರ್ಕಾರದ ಅಧಿಸೂಚನೆಗಳನ್ವಯ, ಸಾರ್ವಜನಿಕ ಗ್ರಂಥಾಲಯ ಇಲಾಖೆಯ ವ್ಯಾಪ್ತಿಯಲ್ಲಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಸ್ಥಳೀಯ ವೃಂದಗಳ ರಚನೆ, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆ) ನಿಯಮಗಳು, 2013 ರನ್ವಯ ಉಲ್ಲೇಖ-3ರಂತೆ ಸ್ಥಳೀಯ ವೃಂದಗಳ ರಚನೆಯನ್ನು ಮಾಡಲಾಗಿರುತ್ತದೆ.ಅದರಂತೆ, ಕೆಳಕಂಡಂತೆ ಹೈದ್ರಾಬಾದ್-ಕರ್ನಾಟಕ ವ್ಯಾಪ್ತಿಯ ಪ್ರದೇಶದವರಿಗಾಗಿ "ಡಿ" ದರ್ಜೆಯ ಖಾಲಿ ಹುದ್ದೆಗಳನ್ನು ಗುರುತಿಸಲಾಗಿದ್ದು, ನೇರ ನೇಮಕಾತಿಯಡಿಯ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಕೆಳಕಂಡ ತಿದ್ದುಪಡಿಗಳನ್ನು ಮಾಡಲಾಗಿದ್ದು, ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಕೆಳಕಂಡ ಮೀಸಲಾತಿ ವರ್ಗೀಕರಣಗಳನ್ವಯ ಹಾಗೂ ಅಂತಿಮ ದಿನಾಂಕಗಳೊಳಗಾಗಿ ಅರ್ಜಿಗಳನ್ನು ಸಲ್ಲಿಸಲು ತಿಳಿಸಲಾಗಿದೆ.

**1) ಹುದ್ದೆಯ ವರ್ಗೀಕರಣ**

**ಅ) ಹುದ್ದೆ: ಗ್ರಂಥಾಲಯ ಸಹವರ್ತಿ**

(ವೇತನ ಶ್ರೇಣಿ: 10400-200-12000-250-13000-300-14200-350-15600-400-16400)

**ರಾಜ್ಯ ಮಟ್ಟದ ಸ್ಥಳೀಯ ವೃಂದದ ಹುದ್ದೆಗಳು**

| ಕ್ರ.ಸಂ. | ಮೀಸಲಾತಿ | ಇತರೆ |
|---|---|---|
| 1. | ಸಾ.ಅ | 01 |

**ಪ್ರಾದೇಶಿಕ ಮಟ್ಟದ ಸ್ಥಳೀಯ ವೃಂದ (ಹೈದ್ರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿ)ದ ಹುದ್ದೆಗಳು**

| | ಪ.ಜಾ. | ಪ.ಪಂ. | ಪ್ರ-1 | ಪ್ರ-2(ಎ) | ಪ್ರ-2(ಬಿ) | ಪ್ರ-3(ಎ) | ಪ್ರ-3(ಬಿ) | ಸಾ.ವ. | ಒಟ್ಟು |
|---|---|---|---|---|---|---|---|---|---|
| ಇತರೆ | - | - | - | - | - | - | - | 03 | **03** |
| ಮ.ಅ. | - | - | - | - | - | - | - | 04 | **04** |
| ಗ್ರಾ.ಅ. | - | - | - | - | - | - | - | 04 | **04** |
| ಅಂ.ವಿ.ಅ | *01 | - | - | * 01 | - | - | - | *01 | ***03** |
| ಮಾ.ಸೈ.ಅ | - | - | - | - | - | - | - | 01 | **01** |
| ಕ.ಮಾ.ಅ. | - | - | - | - | - | - | - | 01 | **01** |
| **ಒಟ್ಟು** | 01 | - | - | 01 | - | - | - | 14 | **16** |
| * ದೃಷ್ಟಿಮಾಂದ್ಯ (Low vision) ವುಳ್ಳ ಅಭ್ಯರ್ಥಿಗಳಿಗೆ | | | | | | | | | |

**ಆ) ಹುದ್ದೆ: ಜವಾನ**

**(ವೇತನ ಶ್ರೇಣಿ: 9600–200–12000–250–13000–300–14200–350–14550)**

**ರಾಜ್ಯ ಮಟ್ಟದ ಸ್ಥಳೀಯ ವೃಂದದ ಹುದ್ದೆಗಳು**

| ಕ್ರ.ಸಂ. | ಮೀಸಲಾತಿ | ಇತರೆ |
|---|---|---|
| 1. | ಸಾ.ಅ | 01 |

**ಇ) ಹುದ್ದೆ: ರಾತ್ರಿ ಕಾವಲುಗಾರ**

**(ವೇತನ ಶ್ರೇಣಿ: 9600–200–12000–250–13000–300–14200–350–14550)**

**ರಾಜ್ಯ ಮಟ್ಟದ ಸ್ಥಳೀಯ ವೃಂದದ ಹುದ್ದೆಗಳು**

| ಕ್ರ.ಸಂ. | ಮೀಸಲಾತಿ | ಇತರೆ |
|---|---|---|
| 1. | ಸಾ.ಅ | 01 |

**ಪ್ರಾದೇಶಿಕ ಮಟ್ಟದ ಸ್ಥಳೀಯ ವೃಂದ (ಹೈದ್ರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿ)ದ ಹುದ್ದೆಗಳು**

| | ಪ.ಜಾ. | ಪ.ಪಂ. | ಪ್ರ–1 | ಪ್ರ–2(ಎ) | ಪ್ರ–2(ಬಿ) | ಪ್ರ–3(ಎ) | ಪ್ರ–3(ಬಿ) | ಸಾ.ವ. | ಒಟ್ಟು |
|---|---|---|---|---|---|---|---|---|---|
| ಇತರೆ | 01 | – | – | – | – | – | – | 01 | 02 |
| ಮ.ಅ. | – | – | – | – | – | – | – | 01 | 01 |
| ಗ್ರಾ.ಅ. | – | – | – | – | – | – | – | – | – |
| ಅಂ.ವಿ.ಅ | – | – | – | – | – | – | – | – | – |
| ಮಾ.ಸೈ.ಅ | – | – | – | – | – | – | – | – | – |
| ಕ.ಮಾ.ಅ. | – | – | – | – | – | – | – | – | – |
| **ಒಟ್ಟು** | 01 | – | – | – | – | – | – | **02** | **03** |

1. ಅರ್ಜಿಯನ್ನು ದಿನಾಂಕ 20–08–2015 ಸಾಯಂಕಾಲ 5.30 ರೊಳಗೆ ಸಲ್ಲಿಸತಕ್ಕದ್ದು.
2. ಮೇಲ್ಕಂಡ ಹುದ್ದೆಗಳಲ್ಲಿ ತಿದ್ದುಪಡಿ ಮಾಡಲಾದಂತೆ, ಮೀಸಲಾತಿ ವರ್ಗೀಕರಣ ಹೊರತುಪಡಿಸಿ ಉಳಿದ ಖಾಲಿ ಹುದ್ದೆಗಳಲ್ಲಿ ಹಾಗೂ ನಿಬಂಧನೆಗಳಲ್ಲಿ ಅಧಿಸೂಚನೆ ದಿಃ 15–06–2015 ರಂತೆ ಯಾವುದೇ ಬದಲಾವಣೆ ಇರುವುದಿಲ್ಲ.
3. ಹೆಚ್ಚಿನ ಮಾಹಿತಿಗಾಗಿ ಈ ಇಲಾಖೆಯ ವೆಬ್‌ಸೈಟ್ www.karnatakapubliclibrary.gov.in ಗೆ ಸಂಪರ್ಕಿಸುವುದು.

**ಡಾ: ಸತೀಶಕುಮಾರ್ ಹೊಸಮನಿ**

ನಿರ್ದೇಶಕರು

ಸಾರ್ವಜನಿಕ ಗ್ರಂಥಾಲಯ ಇಲಾಖೆ ಬೆಂಗಳೂರು

**PR. 204**

**SC. 10**

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ" ಬೆಂಗಳೂರು**

**ಸಂಖ್ಯೆ.ಇಪ(2) 86 /2015–16/ಪಿಎಸ್‌ಸಿ, ದಿನಾಂಕ: 27–06–2015.**

**ತಿದ್ದುಪಡಿ ಅಧಿಸೂಚನೆ**

2013ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ದಿನಾಂಕ: 03–07–2014ರ ರಾಜ್ಯ ಪತ್ರದಲ್ಲಿ ಆಯೋಗದ ಅಧಿಸೂಚನೆ ಸಂಖ್ಯೆ.ಇಪ(1)394/2014–15, ಪಿಎಸ್‌ಸಿ, ದಿನಾಂಕ:30–04–2014ರಲ್ಲಿ ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಅಭ್ಯರ್ಥಿಯು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನದಲ್ಲಿ ಗಳಿಸಿರುವ ವಿನಾಯಿತಿಯನ್ನು ಪರಿಗಣಿಸಿ ಸಂಬಂಧಿತರ ಮಾಹಿತಿಗಾಗಿ ಈ ತಿದ್ದುಪಡಿಯ ಮೂಲಕ ಫಲಿತಾಂಶವನ್ನು ಪ್ರಕಟಿಸಿದೆ.

**ಅಪೆಂಡಿಕ್ಸ್–'ಎ'**

**ಬೆಂಗಳೂರು ಕೇಂದ್ರ**

**ಲೋಕಲ್ ಲಾಸ್ & ಕಮರ್ಷಿಯಲ್ ಬುಕ್ ಕೀಪಿಂಗ್**

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: **50623** ಅನ್ನು ಸೇರಿಸಿ ಓದಿಕೊಳ್ಳುವುದು.

**ವಾಸಿರೆಡ್ಡಿ ವಿಜಯ ಜ್ಯೋತ್ಸ್ನ**

ಪರೀಕ್ಷಾ ನಿಯಂತ್ರಕರು,

ಕರ್ನಾಟಕ ಲೋಕಸೇವಾ ಆಯೋಗ.

**PR. 208**

**SC. 25**

## ಕರ್ನಾಟಕ ಲೋಕಸೇವಾ ಆಯೋಗ

**ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ" ಬೆಂಗಳೂರು**

**ಸಂಖ್ಯೆ.ಇಪ(2) 76 /2015–16/ಪಿಎಸ್‌ಸಿ, ದಿನಾಂಕ: 17–06–2015.**

**ತಿದ್ದುಪಡಿ ಅಧಿಸೂಚನೆ**

2014ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶಗಳನ್ನು ಆಯೋಗದ ಅಧಿಸೂಚನೆ ಸಂಖ್ಯೆ.ಇಪ(1)1455/ 2014–15/ಪಿಎಸ್‌ಸಿ, ದಿನಾಂಕ:06–02–2015ರಂದು ಪ್ರಕಟಿಸಲಾಗಿದ್ದು, ಪರೀಕ್ಷಾ ಸಮಯದಲ್ಲಿ ಅಭ್ಯರ್ಥಿಗಳು ದುರಾಚಾರವೆಸಗಿರುವ ಆರೋಪದ ಹಿನ್ನಲೆಯಲ್ಲಿ 2014ನೇ ಸಾಲಿನ ದ್ವಿತೀಯ ಅಧಿವೇಶನದಲ್ಲಿ ಬರೆದಿರುವ ಎಲ್ಲಾ ವಿಷಯಗಳ ಫಲಿತಾಂಶಗಳನ್ನು ಅಪೆಂಡಿಕ್ಸ್–'ಡಿ'ರಡಿ ತಡೆಹಿಡಿಯಲಾಗಿತ್ತು. ಆದರೆ ಇವರ ಆರೋಪದ ಬಗ್ಗೆ ಅಭ್ಯರ್ಥಿಗಳಿಂದ ವಿವರಣೆ ಪಡೆದು ವಿಸ್ತಾರವಾಗಿ ಪರಿಶೀಲಿಸಿದ ನಂತರ ಇವರುಗಳ ಮೇಲಿನ ಆರೋಪವು ರದ್ದಾದ ಹಿನ್ನೆಲೆಯಲ್ಲಿ ತಡೆಹಿಡಿಯಲಾದ ಫಲಿತಾಂಶಗಳನ್ನು ಪ್ರಕಟಿಸಲು ಆದೇಶವಾಗಿರುವ ಕಾರಣ ಸಂಬಂಧಿತರ ಮಾಹಿತಿಗಾಗಿ ಈ ತಿದ್ದುಪಡಿಯ ಮೂಲಕ ಫಲಿತಾಂಶಗಳನ್ನು ಪ್ರಕಟಿಸಿದೆ.

**ಅಪೆಂಡಿಕ್ಸ್–'ಎ'**

**ರಾಯಚೂರು ಕೇಂದ್ರ**

ಜನರಲ್ ಲಾ ಭಾಗ–II

ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: **177540** ಮತ್ತು **177507**ಅನ್ನು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್–'ಎ'**

**ರಾಯಚೂರು ಕೇಂದ್ರ**

ಅಕೌಂಟ್ಸ್ ಲೋಯರ್

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ:**177540**ಅನ್ನು ಸೇರಿಸಿ ಓದಿಕೊಳ್ಳುವುದು.

**ಅಪೆಂಡಿಕ್ಸ್–'ಎ'**

**ರಾಯಚೂರು ಕೇಂದ್ರ**

ಅಕೌಂಟ್ಸ್ ಹೈಯರ್

ಜನರಲ್ ಲಾ ಭಾಗ–I

ಸಾಮಾನ್ಯ ದರ್ಜೆಯಲ್ಲಿ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: **177507** ಅನ್ನು ಸೇರಿಸಿ ಓದಿಕೊಳ್ಳುವುದು.

**ಆರ್. ವೆಂಕಟೇಶ್ ಕುಮಾರ್ ಭಾ.ಆ.ಸೇ**

ಪರೀಕ್ಷಾ ನಿಯಂತ್ರಕರು,

ಕರ್ನಾಟಕ ಲೋಕಸೇವಾ ಆಯೋಗ.

**PR. 209**

**SC. 25**

## ಕರ್ನಾಟಕ ಲೋಕಸೇವಾ ಆಯೋಗ

**ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ" ಬೆಂಗಳೂರು**

**ಸಂಖ್ಯೆ: ಆರ್ (4) 104/2015–16/ಪಿಎಸ್‌ಸಿ ದಿನಾಂಕ: 09.07.2015**

**ತಿದ್ದುಪಡಿ ಅಧಿಸೂಚನೆ**

ಕರ್ನಾಟಕ ಲೋಕ ಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 1 ಆರ್‌ಟಿ (4) ಬಿ–1 ದಿನಾಂಕ: 25.09.2014 ರಲ್ಲಿ "ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶಾನಲಯದ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಲ್ಲಿನ ಪ್ರಾಂಶುಪಾಲರು/ಸಾಮಾನ್ಯ ವಿಜ್ಞಾನ ಶಿಕ್ಷಕರು/ಸಮಾಜ ವಿಜ್ಞಾನ ಶಿಕ್ಷಕರು ಮತ್ತು ಗಣಿತ ಶಿಕ್ಷಕರು ಹುದ್ದೆಗಳ ವಿದ್ಯಾರ್ಹತೆಯಲ್ಲಿ" ಈ ಕೆಳಕಂಡ ಷರತ್ತನ್ನು ವಿಧಿಸಲಾಗಿತ್ತು.

(2) **In respect of 5 posts along with the above qualification must have studied Urdu as language at the degree level. (04 posts for State Cadre & 01 post for HK Region)**

ಆದರೆ, ಈ 05 ಹುದ್ದೆಗಳಿಗೆ ಇಲಾಖೆಯವರು ವರ್ಗೀಕರಣ ನೀಡದೇ ಇರುವುದರಿಂದ ಮುಂದಿನ ನೇಮಕಾತಿಯಲ್ಲಿ ಈ 05 ಹುದ್ದೆಗಳಿಗೆ ಪ್ರತ್ಯೇಕವಾಗಿ ನೇಮಕಾತಿ ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಲಾಗುವುದೆಂದು ತಿಳಿಸುತ್ತಾ ಸದರಿ ಷರತ್ತನ್ನು ಕೈಬಿಡುವಂತೆ ದಿನಾಂಕ: 12–06–2015 ರ ಪತ್ರದಲ್ಲಿ ಕೋರಿರುತ್ತಾರೆ. ಇಲಾಖೆಯ ಕೋರಿಕೆಯಂತೆ ಈ " ಷರತ್ತನ್ನು ಕೈಬಿಡಲಾಗಿದೆ"

**ಮನೋಜ್ ಕುಮಾರ್ ಮೀನಾ ಭಾ.ಆ.ಸೇ**

ಕಾರ್ಯದರ್ಶಿ

ಕರ್ನಾಟಕ ಲೋಕಸೇವಾ ಆಯೋಗ.

**PR. 205**

**SC. 50**

## ಕಂದಾಯ ಇಲಾಖೆ

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೊಪ್ಪಳ

## ಅಧಿಸೂಚನೆ

ಸಂ:ಕಂ:ಸಿಬ್ಬಂದಿ–1/33/2015–16/ಕ.ನಂ.18618 ದಿನಾಂಕ :30.06.2015

ಕೊಪ್ಪಳ ಜಿಲ್ಲೆ ಕಂದಾಯ ಇಲಾಖೆಯಲ್ಲಿ ವಯೋ ನಿವೃತ್ತಿ, ಮರಣ, ವರ್ಗಾವಣೆ ಇನ್ನಿತರೆ ಕಾರಣಗಳಿಂದ 2 ವಾಹನ ಚಾಲಕರ ಹುದ್ದೆಗಳು ತೆರವಾಗಿರುತ್ತವೆ. ಸದರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರದ ಪತ್ರ ಸಂ/ಸಿಆಸುಇ/273/ಸೇನೆನಿ/2015 ದಿನಾಂಕ: 27.06.2015 ರಲ್ಲಿ ಅನುಮೋದನೆ ನೀಡಿದೆ ಹಾಗೂ ಮಾನ್ಯ ಪ್ರಾದೇಶಿಕ ಆಯುಕ್ತರು, ಕಲಬುರಗಿ ಇವರ ಪತ್ರ ಸಂ:ಕಂ/ಪ್ರಾಆಕ/ಇಎಸ್ಎ/224/2014–15 ದಿನಾಂಕ: 29.06.2015 ರಲ್ಲಿ ಕೂಡಾ ಜಿಲ್ಲಾಧಿಕಾರಿಗಳ ಹಂತದಲ್ಲಿ ಖಾಲಿ ಇರುವ ವಾಹನ ಚಾಲಕರ ಹುದ್ದೆಗಳನ್ನು ಭರ್ತಿ ಮಾಡಲು ನಿರ್ದೇಶನ ನೀಡಿರುತ್ತಾರೆ.

ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 06 ಪಿಎಲ್ಎಕ್ಸ್ 2012 ದಿನಾಂಕ: 06.11.2013 ರಲ್ಲಿ ಸಂವಿಧಾನ ಅನುಚ್ಛೇಧ 371 (ಜೆ) ರ ಪ್ರಕಾರ ನಿಗದಿಪಡಿಸಿದ ಮೀಸಲಾತಿಯಂತೆ ಈ ಕಾರ್ಯಾಲಯದ ಅಧಿಸೂಚನೆ ಸಂ:ಕಂ:ಸಿಬ್ಬಂದಿ–1:178:2013–14 ದಿನಾಂಕ:08/10/2014 ರ ಮೂಲಕ ಜಿಲ್ಲೆಯಲ್ಲಿ ಮಂಜೂರಿಯಾದ ವಾಹನ ಚಾಲಕರ ಹುದ್ದೆಗಳನ್ನು ಸ್ಥಳೀಯ/ಸ್ಥಳೀಯೇತರ ಅಭ್ಯರ್ಥಿಗಳಿಗಾಗಿ ಮೀಸಲಿರಿಸಿ, ರೋಸ್ಟರ್ ಅನ್ನು ಸರಿದೂಗಿಸಿ, ಲಭ್ಯವಾದ ವಾಹನ ಚಾಲಕರ ಖಾಲಿ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ನಿರ್ಧರಿಸಿ ಅರ್ಹ ಅಭ್ಯರ್ಥಿಗಳಿಂದ ನಿಗದಿಪಡಿಸಿದ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಭರ್ತಿ ಮಾಡಲು ಉದ್ದೇಶಿಸಿರುವ ವಾಹನಚಾಲಕರ ಹುದ್ದೆಗಳ ಸಂಖ್ಯೆ–02

**ಖಾಲಿ ಇರುವ ವಾಹನಚಾಲಕರ ಹುದ್ದೆಗಳ ವಿವರಗಳು ಈ ಕೆಳಗಿನಂತಿವೆ**

**ಹುದ್ದೆಗಳ ವರ್ಗೀಕರಣ**

**ಹೈದ್ರಾಬಾದ–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ವಿವರ**

**(ಕೈತಪ್ಪಿಹೋದ ರೋಸ್ಟರ್ ಬಿಂದುಗಳು–01 )**

| ಕ್ರ.ಸಂ | ವರ್ಗೀಕರಣದ ವಿವರ | ಸಾಮಾನ್ಯ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ | ಮಾಜಿ ಸೈನಿಕರು | ಕನ್ನಡ ಮಾಧ್ಯಮ ಅಭ್ಯರ್ಥಿ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 1 | ಸಾಮಾನ್ಯ | 01 | – | – | – | – | – | – | 01 |
| | ಒಟ್ಟು | 01 | – | – | – | – | – | – | 01 |

**ಹೈದ್ರಾಬಾದ–ಕರ್ನಾಟಕ ಪ್ರದೇಶದವರಿಗೆ ಹೊರತುಪಡಿಸಿ ಇತರೆ ಪ್ರದೇಶದವರಿಗೆ ಮೀಸಲಿರಿಸಿದ ಹುದ್ದೆಗಳ ವಿವರ (ಕೈತಪ್ಪಿಹೋದ ರೋಸ್ಟರ್ ಬಿಂದುಗಳು–01)**

| ಕ್ರ.ಸಂ | ವರ್ಗೀಕರಣದ ವಿವರ | ಸಾಮಾನ್ಯ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ | ಮಾಜಿ ಸೈನಿಕರು | ಕನ್ನಡ ಮಾಧ್ಯಮ ಅಭ್ಯರ್ಥಿ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 1 | ಪ.ಜಾ | 01 | – | – | – | – | – | – | 01 |
| | ಒಟ್ಟು | 01 | – | – | – | – | – | – | 01 |

**1.ವೇತನ ಶ್ರೇಣಿ: ರೂ.11600–200–12000–250–13000–300–14200–350–15600–400–17200–450–19000–500–21000**

**ಅಭ್ಯರ್ಥಿಗಳಿಗೆ ಸೂಚನೆ ಮತ್ತು ಷರತ್ತುಗಳು:**

1. ಭರ್ತಿ ಮಾಡಿದ ಅರ್ಜಿಗಳನ್ನು ಅಂಚೆ ಮೂಲಕ ಅಥವಾ ಖುದ್ದಾಗಿ ಈ ಕಛೇರಿಗೆ ಸಲ್ಲಿಸುವುದು. ನಿಗದಿತ ದಿನಾಂಕದ ನಂತರ ಸ್ವೀಕೃತವಾದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2. ವಯೋಮಿತಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಕೆಳಕಂಡ ವಯೋಮಿತಿ ಹೊಂದಿರತಕ್ಕದ್ದು.

| ಕ್ರ.ಸಂ | ಪ್ರವರ್ಗ | ಕನಿಷ್ಠ | ಗರಿಷ್ಠ |
|---|---|---|---|
| 1. | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಪ್ರವರ್ಗ–1 | 18 | 40 |
| 2. | ಹಿಂದುಳಿದ ವರ್ಗ–2ಎ, 2ಬಿ, 3ಎ, 3ಬಿ. | 18 | 38 |
| 3. | ಸಾಮಾನ್ಯ ವರ್ಗದವರಿಗೆ | 18 | 35 |

3. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿ ಇರುತ್ತದೆ.

4. ಸರ್ಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿ ಪ್ರತಿಯನ್ನು ನೇಮಕಾತಿ ಪ್ರಾಧಿಕಾರ/ಇಲಾಖಾ ಮುಖ್ಯಸ್ಥರ ಮುಖಾಂತರ ಅರ್ಜಿಯನ್ನು ಸಲ್ಲಿಸುವುದು.

5. ಅರ್ಜಿದಾರರೊಡನೆ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

6. ಜಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಜಾತಿ ಆದಾಯ ಪರಿಶೀಲನಾ ಸಮಿತಿ) ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

7. ನೇಮಕಾತಿಯ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳು ಕೊಪ್ಪಳ ರವರು ಕಾಯ್ದಿರಿಸಿಕೊಂಡಿರುತ್ತಾರೆ.

8. ಆಯ್ಕೆಯನ್ನು ಆಭ್ಯರ್ಥಿಯ ಎಸ್.ಎಸ್.ಎಲ್.ಸಿ. ಅಂಕಗಳ ಮೆರಿಟ್ ಆಧಾರದ ಮೇಲೆ ಮಾತ್ರ ಪರಿಗಣಿಸಲಾಗುವುದು. ಎಸ್.ಎಸ್.ಎಲ್.ಸಿ ವಿದ್ಯಾರ್ಹತೆಯನ್ನು ಅಧಿಸೂಚನೆ ಹೊರಡಿಸುವ ದಿನಾಂಕಕ್ಕೆ ಮುಂಚಿತವಾಗಿ ಹೊಂದಿರಬೇಕು.

9. ಪುರುಷ ಅಭ್ಯರ್ಥಿಗಳಿಗೆ ಎತ್ತರ 163 ಸೆ.ಮೀ, ಎದೆ ಸುತ್ತಳತೆ 81 ಸೆ.ಮೀ. ಗಿಂತ ಕಡಿಮೆ ಇರಬಾರದು. ವಿಸ್ತರಿಸಿದಾಗ ಕನಿಷ್ಠ 5 ಸೆ.ಮೀ ಹಿಗ್ಗಬೇಕು. ದೃಷ್ಠಿ ಸಾಮರ್ಥ್ಯ 6/9 ಅಥವಾ 6/12 ಆಗಿರಬೇಕು.

10. ಅರ್ಜಿ ಶುಲ್ಕ: 1] ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ / ಪ್ರವರ್ಗ–1 ರೂ. 100/–

2] ಇತರರಿಗೆ ರೂ. 200/–

ನಿಗದಿತ ಅರ್ಜಿ ಶುಲ್ಕವನ್ನು ರಾಷ್ಟ್ರೀಕೃತ ಬ್ಯಾಂಕಿನ ಡಿಮಾಂಡ ಡ್ರಾಫ್ಟ್ ಮೂಲಕ ಸಂದಾಯಿಸತಕ್ಕದ್ದು.

11. ಜಾತಿ ಮೀಸಲಾತಿ ಪ್ರಮಾಣ ಪತ್ರಗಳು

ಮೀಸಲಾತಿ ಸೌಲಭ್ಯ ಆಪೇಕ್ಷಿಸುವ ಅಭ್ಯರ್ಥಿಗಳು ಈ ಕೆಳಕಂಡ ಮೂಲ ದಾಖಲೆಗಳನ್ನು ನಿಗದಿತ ನಮೂನೆಯಲ್ಲಿ ಸಂಬಂಧಪಟ್ಟ ರೆವಿನ್ಯೂ ಪ್ರಾಧಿಕಾರದಿಂದ(ಸಂಬಂಧಪಟ್ಟ ತಹಶೀಲ್ದಾರರಿಂದ) ಪಡೆದು ಪರಿಶೀಲಿಸುವ ದಿನಾಂಕದಂದು ಹಾಜರುಪಡಿಸಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ಪರಿಗಣಿಸಲಾಗುವುದಿಲ್ಲ. ಪ.ಜಾ/ಪ.ಪಂ *ನಮೂನೆ–ಡಿ ಯಲ್ಲಿ, ಪ್ರವರ್ಗ–1 ನಮೂನೆ–ಇ ಯಲ್ಲಿ, ಪ್ರವರ್ಗ 2ಎ/2ಬಿ/3ಎ/3ಬಿ *ನಮೂನೆ–ಎಫ್ ನಲ್ಲಿ ಸಂಬಂಧಪಟ್ಟ ತಹಶೀಲ್ದಾರರಿಂದ ಚಾಲ್ತಿಯಲ್ಲಿರುವ ಪ್ರಮಾಣ ಪತ್ರ ಪಡೆದಿರಬೇಕು.

12. ದೈಹಿತ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ವಾಹನ ಚಾಲಕ ನೇಮಕಾತಿಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.

**13. <u>ಹೈದ್ರಾಬಾದ–ಕರ್ನಾಟಕ ಪ್ರದೇಶದ ಮೀಸಲಾತಿ ಬಗ್ಗೆ</u>**

- ಹೈದ್ರಾಬಾದ–ಕರ್ನಾಟಕ ಪ್ರದೇಶಕ್ಕೆ ಒಳಪಡುವ ಯಾದಗಿರಿ, ಬಳ್ಳಾರಿ, ರಾಯಚೂರು, ಕೊಪ್ಪಳ, ಕಲಬುರಗಿ ಮತ್ತು ಬೀದರ ಜಿಲ್ಲೆಗಳ ಅಭ್ಯರ್ಥಿಗಳು ಹೈದ್ರಾಬಾದ–ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಇಚ್ಚಿಸಿದ್ದಲ್ಲಿ, ಸಂವಿಧಾನದ ಅನುಚ್ಛೇದ 371(ಜೆ) ಅಡಿಯಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಕಂದಾಯ ಉಪ ವಿಭಾಗದ ಉಪವಿಭಾಗಾಧಿಕಾರಿಗಳು ನೀಡಿರುವ ಅರ್ಹತಾ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ಒಳಗಾಗಿ ಪಡೆದಿರತಕ್ಕದ್ದು.
- ಅಭ್ಯರ್ಥಿಗಳು ಅರ್ಜಿ ಸಲ್ಲಿಸುವಾಗ ಹೈದ್ರಾಬಾದ–ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗೆ ಅಥವಾ ಮೀಸಲಿರಿಸಲಾರದ ಹುದ್ದೆಗೆ ಅರ್ಜಿ ಸಲ್ಲಿಸಿದ ಬಗ್ಗೆ ಕಡ್ಡಾಯವಾಗಿ ನಮೂದಿಸತಕ್ಕದ್ದು.
- ಹೈದ್ರಾಬಾದ–ಕರ್ನಾಟಕ ಪ್ರದೇಶದವರಲ್ಲದ ಅಭ್ಯರ್ಥಿಗಳು ಹೈದ್ರಾಬಾದ–ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
- ಹೈದ್ರಾಬಾದ–ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗಳ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಅರ್ಹತಾ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿ, [ಅಧ್ಯಕ್ಷರು, ಹೈದ್ರಾಬಾದ ಕರ್ನಾಟಕ ಅರ್ಹತಾ ಪ್ರಮಾಣ ಪತ್ರ ಪರಿಶೀಲನಾ ಸಮಿತಿ] ರವರಿಂದ ಸಿಂಧುತ್ವ ಪ್ರಮಾಣಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

**14. ಅರ್ಹತಾ ಷರತ್ತುಗಳು:–**

- ಭಾರತೀಯ ನಾಗರೀಕನಾಗಿರತಕ್ಕದ್ದು.
- ಚಾಲ್ತಿಯಲ್ಲಿರುವ ಭಾರಿ ಮೋಟಾರು ವಾಹನ ಚಾಲನಾ ಪ್ರಮಾಣ ಪತ್ರ (HMV)
- ಪ್ರಥಮ ಚಿಕಿತ್ಸಾ ಪ್ರಮಾಣ ಪತ್ರ.
- ಅಭ್ಯರ್ಥಿಯು ಮಾನಸಿಕ ಹಾಗೂ ದೈಹಿಕವಾಗಿ ಆರೋಗ್ಯವಂತರಾಗಿರುವ ಬಗ್ಗೆ ಜಿಲ್ಲಾ ಶಸ್ತ್ರ ಚಿಕಿತ್ಸಕರಿಂದ ವೈದ್ಯಕೀಯ ಪ್ರಮಾಣ ಪತ್ರ.

**15. ಈ ಕೆಳಕಂಡ ಮೂಲ ದಾಖಲೆಗಳನ್ನು ದಾಖಲಾತಿಗಳ ಪರಿಶೀಲನಾ ಸಮಯದಲ್ಲಿ ಹಾಜರುಪಡಿಸಬೇಕು.**

- ಹುದ್ದೆಗಳಿಗೆ ನಿಗದಿಪಡಿಸಲಾದ ಎಸ್.ಎಸ್.ಎಲ್.ಸಿ. ಉತ್ತೀರ್ಣರಾದ ವಿದ್ಯಾರ್ಹತೆಯ ಅಂಕಪಟ್ಟಿ.
- ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆ ಪ್ರಮಾಣ ಪತ್ರ
- ಪರಿಶಿಷ್ಟ ಜಾತಿ/ಪ.ಪಂ/ಪ್ರವರ್ಗ–1/ಪ್ರವರ್ಗ–2ಎ/ಪ್ರವರ್ಗ–2ಬಿ/ಪ್ರವರ್ಗ–3ಎ/ಪ್ರವರ್ಗ–3ಬಿ ಗಳ ಪ್ರಮಾಣ ಪತ್ರಗಳು(ಮೀಸಲಾತಿ ಕೋರಿದ್ದಲ್ಲಿ)
- ಚಾಲ್ತಿಯಲ್ಲಿರುವ ಭಾರಿ ಮೋಟಾರು ವಾಹನ ಚಾಲನಾ ಪ್ರಮಾಣ ಪತ್ರ (HMV).
- ಪ್ರಥಮ ಚಿಕಿತ್ಸಾ ಪ್ರಮಾಣ ಪತ್ರ.

ಮೇಲ್ಕಂಡಂತೆ ನಿಗದಿಪಡಿಸಿದ ಎಲ್ಲಾ ದಾಖಲೆಗಳನ್ನು ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ ದಾಖಲಾತಿಗಳ ಪರಿಶೀಲನಾ ಸಮಯದಲ್ಲಿ ಹಾಜರುಪಡಿಸತಕ್ಕದ್ದು.

**16. ಇತರೆ ಸೂಚನೆಗಳು:–**

- ಅರ್ಜಿಯಲ್ಲಿ ತಪ್ಪು/ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳ ನೇಮಕಾತಿಯನ್ನು ವಜಾಗೊಳಿಸುವುದಲ್ಲದೇ ಕ್ರೀಮಿನಲ್ ಮೊಕದ್ದಮೆ ದಾಖಲಿಸಲಾಗುವುದು.
- ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಲು ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ದಿನವು ಅರ್ಜಿಗಳನ್ನು ಅಂಚೆಯ ಮೂಲಕ ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
- ಅರ್ಜಿಯಲ್ಲಿ ನೀಡುವ ವಿಳಾಸವೇ ಅಂತಿಮವಾಗಿದ್ದು, ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿಕೊಡಲಾಗುವುದು. ನಂತರದಲ್ಲಿ ವಿಳಾಸ ಬದಲಾವಣೆ ಬಗ್ಗೆ ಯಾವುದೇ ಪತ್ರ ವ್ಯವಹಾರ ಪರಿಗಣಿಸಲಾವುದಿಲ್ಲ.
- ಅಭ್ಯರ್ಥಿಯ ಹೆಸರು ಅಂತಿಮ ಆಯ್ಕೆ ಪಟ್ಟಿಯಲ್ಲಿ ಸೇರ್ಪಡೆಯಾಗಿದೆ ಎಂಬುದರ ಆಧಾರದ ಮೇಲೆ ಅಭ್ಯರ್ಥಿಗೆ ನೇಮಕಾತಿ ಹಕ್ಕು ದೊರೆಯುವುದಿಲ್ಲ.
- ಅರ್ಜಿಗಳು ದಿನಾಂಕ: 04/07/2015 ರಿಂದ ಜಿಲ್ಲಾಧಿಕಾರಿಗಳ ಕಾರ್ಯಾಲಯ ಕೊಪ್ಪಳದಲ್ಲಿ ಲಭ್ಯವಿರುತ್ತದೆ. ಹಾಗೂ ದಿನಾಂಕ: 01/08/2015 ರ ಸಂಜೆ 5–30 ರವರೆಗೆ ಮಾತ್ರ ಲಭ್ಯವಿರುತ್ತದೆ. ಅರ್ಜಿಗಳನ್ನು ನೇರವಾಗಿ ಜಿಲ್ಲಾಧಿಕಾರಿಗಳ ಕಾರ್ಯಾಲಯಕ್ಕೆ ಮಾತ್ರ ಸಲ್ಲಿಸತಕ್ಕದ್ದಾಗಿದೆ. ಅರ್ಜಿಗಳನ್ನು ಖುದ್ದಾಗಿ ಅಥವಾ ನೋಂದಾಯಿತ ಅಂಚೆ ಮೂಲಕ ಸಲ್ಲಿಸಲು ಅವಕಾಶ ಕೂಡಾ ಇರುತ್ತದೆ. ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ ಮುಗಿದ ನಂತರ ಸ್ವೀಕೃತವಾಗುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
- 10ನೇ ತರಗತಿ (ಎಸ್.ಎಸ್.ಎಲ್.ಸಿ) ವಿದ್ಯಾರ್ಹತೆಯಲ್ಲಿ ಗಳಿಸಿದ ಅಂಕಗಳ ಮೆರಿಟ್ ಆಧಾರದಲ್ಲಿ ಮೀಸಲಾಗನುಗುಣವಾಗಿ ಪರಿಶೀಲನಾ ಪಟ್ಟಿಯನ್ನು 17/08/2015 ರಂದು ಪ್ರಕಟಿಸಲಾಗುವುದು. ಪರಿಶೀಲನಾ ಪಟ್ಟಿಯಲ್ಲಿನ ಅಭ್ಯರ್ಥಿಗಳು ನಿಗದಿತ ದಿನಾಂಕದಂದು (04/09/2015) ಮೂಲ ದಾಖಲೆಗಳೊಂದಿಗೆ ಪರಿಶೀಲನೆಗಾಗಿ ಹಾಜರಾಗಬೇಕಾಗಿರುತ್ತದೆ
- ನಿಗದಿತ ದಿನಾಂಕದಂದು ದಾಖಲಾತಿಗಳ ಪರಿಶೀಲನೆಗೆ ಹಾಜರಾಗದೇ ಇರುವ ಅಭ್ಯರ್ಥಿಗಳು ಅನರ್ಹಗೊಳ್ಳುತ್ತಾರೆ ಹಾಗೂ ಅವರ ಹೆಸರನ್ನು ನೇಮಕಾತಿ ಪ್ರಕ್ರಿಯೆಯಿಂದ ಕೈಬಿಡಲಾಗುವುದು.
- ಅರ್ಜಿಯಲ್ಲಿ ಕೇಳಿರುವ ಪೂರ್ಣ ಮಾಹಿತಿಯನ್ನು ಭರ್ತಿ ಮಾಡಿಲ್ಲದೇ ಇರುವ ಅಭ್ಯರ್ಥಿಗಳ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೇ ತಿರಸ್ಕರಿಸಲಾಗುವುದು.

ಹೆಚ್ಚಿನ ವಿವರಗಳಿಗಾಗಿ ಕೊಪ್ಪಳ ಜಿಲ್ಲೆಯ ವೆಬ್‌ಸೈಟ್ www.koppal.nic.in ರಲ್ಲಿನ ಮಾಹಿತಿ ಸೂಚಿಯಲ್ಲಿ ಲಭ್ಯವಿರುತ್ತದೆ ಮತ್ತು ಸ್ಪಷ್ಟೀಕರಣ ಅವಶ್ಯವಿದ್ದಲ್ಲಿ ಸಹಾಯವಾಣಿ ಸಂಖ್ಯೆ 08539–221690ಕ್ಕೆ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ

**ಆರ್.ಆರ್.ಜನ್ನು ಭಾ.ಆ.ಸೇ**

ಅಧ್ಯಕ್ಷರು ಹಾಗೂ ಜಿಲ್ಲಾಧಿಕಾರಿಗಳು

ವಾಹನ ಚಾಲಕರ ನೇಮಕಾತಿ ಸಮಿತಿ ಕೊಪ್ಪಳ ಜಿಲ್ಲೆ, ಕೊಪ್ಪಳ

**PR. 189**

**SC. 200**

## ಕಂದಾಯ ಇಲಾಖೆ

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೊಪ್ಪಳ.

### ಅಧಿಸೂಚನೆ

**ಸಂ:ಕಂ:ಸಿಬ್ಬಂದಿ–1/34/2015–16/ಕ.ನಂ.18619 ದಿನಾಂಕ : 30.06.2015**

ಕೊಪ್ಪಳ ಜಿಲ್ಲೆ ಕಂದಾಯ ಇಲಾಖೆಯಲ್ಲಿ ವಯೋ ನಿವೃತ್ತಿ, ಮರಣ ಇನ್ನಿತರೆ ಕಾರಣಗಳಿಂದ 9 [ಒಂಬತ್ತು] "ಡಿ" ದರ್ಜೆ ಹುದ್ದೆಗಳು ತೆರವಾಗಿರುತ್ತವೆ. ಸದರಿ ಹುದ್ದೆಗಳನ್ನು ಕರ್ನಾಟಕ ನಾಗರೀಕ ಸೇವೆಗಳು (ಕೇಡರ್ ಎಂಡ್ ರಿಕ್ರೂಟ್‌ಮೆಂಟ್ ಬೈ ಕಾಂಪಿಟೇಟಿವ್ ಎಕ್ಸಾಮಿನೇಷನ್ಸ್ ಆಂಡ್ ಸೆಲೆಕ್ಷನ್ (ಜನರಲ್)) ನಿಯಮಗಳು 2006 ರನ್ವಯ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರದ ಪತ್ರ ಸಂ/ಸಿಆಸುಇ/273/ಸೆನೆನಿ/2015 ದಿನಾಂಕ: 27.06.2015 ರಲ್ಲಿ ಅನುಮೋದನೆ ನೀಡಿದೆ. ಹಾಗೂ ಮಾನ್ಯ ಪ್ರಾದೇಶಿಕ ಆಯುಕ್ತರು, ಕಲಬುರಗಿ ಇವರ ಪತ್ರ ಸಂ:ಕಂ/ಪ್ರಾಆಕ/ಇಎಸ್‌ಎ/224/2014–15 ದಿನಾಂಕ: 29.06.2015 ರಲ್ಲಿ ಕೂಡಾ ಜಿಲ್ಲಾಧಿಕಾರಿಗಳ ಹಂತದಲ್ಲಿ ಖಾಲಿ ಇರುವ ಗ್ರೂಪ್ "ಡಿ" ಹುದ್ದೆಗಳನ್ನು ಭರ್ತಿ ಮಾಡಲು ನಿರ್ದೇಶನ ನೀಡಿರುತ್ತಾರೆ.

ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 06 ಪಿಎಲ್‌ಎಕ್ಸ್ 2012 ದಿನಾಂಕ: 06.11.2013 ರಲ್ಲಿ ಸಂವಿಧಾನ ಅನುಚ್ಛೇಧ 371 (ಜೆ) ರ ಪ್ರಕಾರ ನಿಗದಿಪಡಿಸಿದ ಮೀಸಲಾತಿಯಂತೆ ಈ ಕಾರ್ಯಾಲಯದ ಅಧಿಸೂಚನೆ ಸಂ:ಕಂ:ಸಿಬ್ಬಂದಿ–1:178:2013–14 ದಿನಾಂಕ:08/10/2014 ರ ಮೂಲಕ ಜಿಲ್ಲೆಯಲ್ಲಿ ಮಂಜೂರಿಯಾದ ಗ್ರೂಪ್ ಡಿ ಹುದ್ದೆಗಳನ್ನು ಸ್ಥಳೀಯ/ ಸ್ಥಳೀಯೇತರ ಅಭ್ಯರ್ಥಿಗಳಿಗಾಗಿ ಮೀಸಲಿರಿಸಿ, ರೋಸ್ಟರ್ ಅನ್ನು ಸರಿದೂಗಿಸಿ, ಲಭ್ಯವಾದ ಗ್ರೂಪ್ "ಡಿ" ಖಾಲಿ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ನಿರ್ಧರಿಸಿ ಅರ್ಹ ಅಭ್ಯರ್ಥಿಗಳಿಂದ ನಿಗದಿಪಡಿಸಿದ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

[ಎ] ಭರ್ತಿ ಮಾಡಲು ಉದ್ದೇಶಿಸಿರುವ ಗ್ರೂಪ್ ಡಿ ಹುದ್ದೆಗಳ ಸಂಖ್ಯೆ–09

[ಬಿ]ಅರ್ಜಿಗಳನ್ನು ದಿನಾಂಕ: 04/07/2015 ರಿಂದ 01/08/2015 ಒಳಗಾಗಿ ಸಲ್ಲಿಸತಕ್ಕದ್ದು

**ಖಾಲಿ ಇರುವ ಗ್ರೂಪ್ ಡಿ ಹುದ್ದೆಗಳ ವಿವರಗಳು ಈ ಕೆಳಗಿನಂತಿವೆ**

**ಹುದ್ದೆಗಳ ವರ್ಗೀಕರಣ**

**ಹೈದ್ರಾಬಾದ–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ವಿವರ**

**(ಕೈತಪ್ಪಿಹೋದ ರೋಸ್ಟರ್ ಬಿಂದುಗಳು–05 )**

| ಕ್ರಸಂ | ವರ್ಗೀಕರಣದ ವಿವರ | ಸಾಮಾನ್ಯ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ | ಮಾಜಿ ಸೈನಿಕರು | ಕನ್ನಡ ಮಾಧ್ಯಮ ಅಭ್ಯರ್ಥಿ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 1 | ಸಾಮಾನ್ಯ | 01 | 02 | 01 | 01 | – | – | – | 05 |
| | **ಒಟ್ಟು** | **01** | **02** | **01** | **01** | – | – | – | **05** |

**ಹೈದ್ರಾಬಾದ–ಕರ್ನಾಟಕ ಪ್ರದೇಶದವರಿಗೆ ಹೊರತುಪಡಿಸಿ ಇತರೆ ಪ್ರದೇಶದವರಿಗೆ ಮೀಸಲಿರಿಸಿದ ಹುದ್ದೆಗಳ ವಿವರ (ಕೈತಪ್ಪಿಹೋದ ರೋಸ್ಟರ್ ಬಿಂದುಗಳು–04)**

| ಕ್ರಸಂ | ವರ್ಗೀಕರಣದ ವಿವರ | ಸಾಮಾನ್ಯ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ | ಮಾಜಿ ಸೈನಿಕರು | ಕನ್ನಡ ಮಾಧ್ಯಮ ಅಭ್ಯರ್ಥಿ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 1 | ಪ.ಪಂ | 01 | – | – | – | – | – | – | 01 |
| 2 | ಪ್ರವರ್ಗ–1 | 01 | – | – | – | – | – | – | 01 |
| 3 | ಸಾಮಾನ್ಯ | 01 | 01 | – | – | – | – | – | 02 |
| | ಒಟ್ಟು | 03 | 01 | – | – | – | – | – | 04 |

1) **ಅರ್ಜಿ ಸಲ್ಲಿಸುವ ವಿಧಾನ:** ಅರ್ಜಿಗಳನ್ನು ನೇರವಾಗಿ ಜಿಲ್ಲಾಧಿಕಾರಿಗಳ ಕಾರ್ಯಾಲಯ ಕೊಪ್ಪಳದಲ್ಲಿ ಮಾತ್ರ ಸಲ್ಲಿಸಬಹುದಾಗಿದೆ. ಅರ್ಜಿಗಳನ್ನು ಖುದ್ದಾಗಿ ಅಥವಾ ನೊಂದಾಯಿತ ಅಂಚೆ ಮೂಲಕ ಸಲ್ಲಿಸಲು ಅವಕಾಶ ಇರುತ್ತದೆ.

2) **ಅರ್ಜಿ ಶುಲ್ಕ:** (ಬ್ಯಾಂಕ ಶುಲ್ಕ ಹೊರತುಪಡಿಸಿ)

| | |
|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 | ರೂ.100–00 |
| ಸಾಮಾನ್ಯ ವರ್ಗ, ಪ್ರವರ್ಗ–2ಎ, 2ಬಿ, 3ಎ, 3ಬಿ | ರೂ.200–00 |

ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಭರ್ತಿ ಮಾಡಿದ ನಂತರ ನಿಗದಿಪಡಿಸಿದ ಅರ್ಜಿ ಶುಲ್ಕವನ್ನು ರಾಷ್ಟ್ರೀಕೃತ ಬ್ಯಾಂಕಿನ ಡಿಮಾಂಡ ಡ್ರಾಫ್ಟ್ ಅನ್ನು ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು. ಅಭ್ಯರ್ಥಿಗಳು ಸ್ವೀಕೃತಿ ಪ್ರತಿ ಮತ್ತು ಡಿಮಾಂಡ ಡ್ರಾಫ್ಟ್‌ನ ಒಂದು ಪ್ರತಿಯನ್ನು ಕಡ್ಡಾಯವಾಗಿ ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು. ಈ ದಾಖಲೆಗಳನ್ನು ಪರಿಶೀಲನೆಗೆ ನಿಗದಿಪಡಿಸಿದ ದಿನಾಂಕ: 04/09/2015 ರಂದು ಹಾಜರುಪಡಿಸತಕ್ಕದ್ದು. ನಿಗದಿತ ಅರ್ಜಿ ಶುಲ್ಕ ಪಾವತಿಸಲು ಕೊನೆಯ ದಿನಾಂಕ: 01/08/2015 ಆಗಿರುತ್ತದೆ. ನಿಗದಿತ ಅರ್ಜಿ ಶುಲ್ಕ ಹೊರತುಪಡಿಸಿ ಬ್ಯಾಂಕ ಶುಲ್ಕವನ್ನು ಅಭ್ಯರ್ಥಿಗಳೇ ಪ್ರತ್ಯೇಕವಾಗಿ ಸಂದಾಯ ಮಾಡತಕ್ಕದ್ದು. ಡಿ.ಡಿ ಹೊರತುಪಡಿಸಿ ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಅರ್ಜಿ ಶುಲ್ಕ ರೂಪದಲ್ಲಿ ಸಲ್ಲಿಸಿದ್ದಲ್ಲಿ ಅದನ್ನು ಸ್ವೀಕರಿಸಲಾಗುವುದಿಲ್ಲ. ಅಲ್ಲದೆ ಒಮ್ಮೆ ಅರ್ಜಿ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಇತರೆ ಯಾವುದೇ ನೇಮಕಾತಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಭ ಮಾಡದೇ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

3) ಅರ್ಜಿ ಶುಲ್ಕವನ್ನು ದಿನಾಂಕ: 04/07/2015 ರಿಂದ 01/08/2015 ರವರೆಗೆ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ ಡಿಮಾಂಡ ಡ್ರಾಫ್ಟ್ ಅನ್ನು ಪಡೆದು ಅರ್ಜಿಯೊಂದಿಗೆ ಕಛೇರಿ ಸಮಯದ ವೇಳೆಯಲ್ಲಿ ಸಲ್ಲಿಸತಕ್ಕದ್ದು.

4) **ಅರ್ಹತಾ ಷರತ್ತುಗಳು:**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು

ಆ) ಶೈಕ್ಷಣಿಕ ವಿದ್ಯಾರ್ಹತೆಯನ್ನು ಕರ್ನಾಟಕ ರಾಜ್ಯದಲ್ಲಿ ಪೂರೈಸಿರಬೇಕು

ಇ) ಅಭ್ಯರ್ಥಿಗಳು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ/ಮಾನಸಿಕ ನ್ಯೂನತೆಯಿಂದ ಮುಕ್ತರಾಗಿರತಕ್ಕದ್ದು.

ಈ) ಅಭ್ಯರ್ಥಿಯು ಈ ಹಿಂದೆ ಯಾವುದೇ ಸರಕಾರಿ ಸೇವೆಯಿಂದ ವಜಾಗೊಂಡಿರಬಾರದು.

5) **ಶೈಕ್ಷಣಿಕ ವಿದ್ಯಾರ್ಹತೆ:**

ಸರ್ಕಾರದ ಅಧಿಸೂಚನೆ ಸಂ/ಡಿಪಿಎಆರ್/30/ಎಸ್.ಆರ್.ಆರ್/2013 ದಿನಾಂಕ: 06.01.2014 ರಂತೆ ಕನಿಷ್ಠ 10ನೇ ತರಗತಿ (ಎಸ್.ಎಸ್.ಎಲ್.ಸಿ) ತೇರ್ಗಡೆ ಹೊಂದಿರಬೇಕು. ಈ ವಿದ್ಯಾರ್ಹತೆಯನ್ನು ಅಧಿಸೂಚನೆ ಹೊರಡಿಸುವ ದಿನಾಂಕಕ್ಕೆ ಮುಂಚಿತವಾಗಿ ಹೊಂದಿರಬೇಕು. ವಿದ್ಯಾರ್ಹತೆಯ ದಾಖಲಾತಿಗಳ ನೈಜತೆ ಬಗ್ಗೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ದೃಢಪಡಿಸಿಕೊಂಡ ನಂತರ ನೇಮಕಾತಿ ಆದೇಶ ನೀಡಲಾಗುವುದು.

6) **ವೇತನ ಶ್ರೇಣಿ:**

**ರೂ.9600–200–12000–250–13000–300–14200–350–14550**

7) **ವಯೋಮಿತಿ:** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವಾದ **01/08/2015** ರಂದು ಈ ಕೆಳಗಿನಂತೆ ವಯೋಮಿತಿ ಹೊಂದಿರತಕ್ಕದ್ದು.

| ಕ್ರ.ಸಂ | ಪ್ರವರ್ಗ | ಕನಿಷ್ಠ | ಗರಿಷ್ಠ |
|---|---|---|---|
| 1. | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ/ಪ್ರವರ್ಗ–1 | 18 | 40 |
| 2. | 2ಎ, 2ಬಿ, 3ಎ, 3ಬಿ. | 18 | 38 |
| 3. | ಸಾಮಾನ್ಯ ವರ್ಗದವರಿಗೆ | 18 | 35 |

ಎಸ್.ಎಸ್.ಎಲ್.ಸಿ. ಅಥವಾ ವರ್ಗಾವಣೆ ಪ್ರಮಾಣ ಪತ್ರ [ಟಿ.ಸಿ] ಅಥವಾ ಕ್ಯುಮುಲೇಟಿವ್ ರೆಕಾರ್ಡ್‌ನಲ್ಲಿ ನಮೂದಿಸಿರುವ ಜನ್ಮ ದಿನಾಂಕವನ್ನು ಆಯ್ಕೆ ಪ್ರಾಧಿಕಾರವು ಪರಿಗಣಿಸುತ್ತದೆ. ಇತರೆ ಯಾವುದೇ ದಾಖಲಾತಿಗಳನ್ನು ಪರಿಗಣಿಸಲಾಗುವುದಿಲ್ಲ. ಕರ್ನಾಟಕ ಸರ್ಕಾರಿ ಸೇವಾ [ಸಾಮಾನ್ಯ ನೇಮಕಾತಿ]1977 ರ ನಿಯಮಾವಳಿಗಳ ನಿಯಮ 6 ರಂತೆ ವಯೋಮಿತಿಯನ್ನು ಅದರಲ್ಲಿ ತಿಳಿಸಿರುವ ಮಟ್ಟಿಗೆ ಸಂಬಂಧಪಟ್ಟ ದಾಖಲೆ ಒದಗಿಸಿದಲ್ಲಿ ಹೆಚ್ಚಿಸುವ ಬಗ್ಗೆ ಪರಿಶೀಲಿಸಲಾಗುವುದು.

ಕರ್ನಾಟಕ ಸರ್ಕಾರಿ ಸೇವಾ [ಸಾಮಾನ್ಯ ನೇಮಕಾತಿ]1977 ರ ನಿಯಮಾವಳಿಗಳ ನಿಯಮ 6 ರಂತೆ ಗರಿಷ್ಠ ವಯೋಮಿತಿಯನ್ನು ಈ ಮುಂದಿನ ಪ್ರಕರಣಗಳಲ್ಲಿ ಮುಂದೆ ಹೇಳಿರುವಷ್ಟರ ಮಟ್ಟಿಗೆ ಹೆಚ್ಚಿಸಲು ಅವಕಾಶವಿದೆ.

[ಎ] ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪಿಸಲಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಅಡಿಯಲ್ಲಿನ ಸರ್ಕಾರದಿಂದ ಸ್ಥಾಪಿತವಾಗಿದ್ದು, ಮತ್ತು ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ನಿಗಮದ ಅಡಿಯಲ್ಲಿ ಹುದ್ದೆಯನ್ನು ಧಾರಣ ಮಾಡಿರುವ ಅಥವಾ ಧಾರಣ ಮಾಡಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಆತ ಅಂಥ ಹುದ್ದೆಯನ್ನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದ್ದಷ್ಟು ಅಥವಾ [ಹತ್ತು] ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

[ಬಿ] ಮಾಜಿ ಸೈನಿಕನಾಗಿರುವ ಅಭ್ಯರ್ಥಿಯ ಸಂದರ್ಭದಲ್ಲಿ ಮೂರು ವರ್ಷಗಳು ಮತ್ತು ಇದಕ್ಕೆ ಕೇಂದ್ರದ ಸಶಸ್ತ್ರ ಪಡೆಗಳಲ್ಲಿ ಅವನು ಸೇವೆ ಸಲ್ಲಿಸಿರುವಷ್ಟು ವರ್ಷಗಳನ್ನು ಸೇರಿಸಬೇಕು.

[ಸಿ] ಪೂರ್ಣಾವಧಿ ಕೆಡೆಟ್ ಇನ್‌ಸ್ಟ್ರಕ್ಟರ್ ಆಗಿ ಸೇವೆ ಸಲ್ಲಿಸಿದ ತರುವಾಯ, ರಾಷ್ಟ್ರೀಯ ಕೆಡೆಟ್ ದಳದಿಂದ ಬಿಡುಗಡೆ ಮಾಡಿದ ಅಭ್ಯರ್ಥಿಯ ಸಂದರ್ಭದಲ್ಲಿ, ಹಾಗೆ ಕೆಡೆಟ್ ಇನ್‌ಸ್ಟ್ರಕ್ಟರ್‌ರಾಗಿ ಆತನು ಸೇವೆ ಸಲ್ಲಿಸಿರುವಷ್ಟು ವರ್ಷಗಳು.

[ಡಿ]ರಾಜ್ಯ ಸರ್ಕಾರ ಪ್ರಾಯೋಜಿತ ಗ್ರಾಮೀಣ ಕೈಗಾರೀಕರಣ ಯೋಜನೆಯಲ್ಲಿ ನೇಮಕಗೊಂಡ ಗ್ರಾಮ ಸಮೂಹ ಇನ್ ಪೆಕ್ಟರ್ ಆಗಿರುವ ಅಥವಾ ಆಗಿದ್ದಂಥ ಅಭ್ಯರ್ಥಿಯು ಸಂದರ್ಭದಲ್ಲಿ ಅಂಥ ಗ್ರಾಮ ಸಮೂಹ ಇನ್ಸ್‌ಪೆಕ್ಟರಾಗಿ ಆತ ಸೇವೆ ಸಲ್ಲಿಸಿರುವಷ್ಟು ವರ್ಷಗಳು.

[ಇ]ಅಂಗವಿಕಲನಾಗಿರುವ ಅಭ್ಯರ್ಥಿಯ ಸಂದರ್ಭದಲ್ಲಿ ಹತ್ತು ವರ್ಷಗಳು

[ಎಫ್] ಈ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಹುದ್ದೆಯನ್ನು ಧಾರಣೆ ಮಾಡಿರುವ ಅಥವಾ ಧಾರಣ ಮಾಡಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಅಂಥ ಹುದ್ದೆಯನ್ನು ಆತನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದ್ದಷ್ಟು ವರ್ಷಗಳು ಅಥವಾ ಐದು ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

[ಜಿ] ಅಭ್ಯರ್ಥಿ ವಿಧವೆಯಾಗಿರುವ ಸಂದರ್ಭದಲ್ಲಿ ಹತ್ತು ವರ್ಷಗಳು

[ಹೆಚ್]ಜೀತ ಕಾರ್ಮಿಕನಾಗಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಹತ್ತು ವರ್ಷಗಳು.

**8) ಹೈದ್ರಾಬಾದ-ಕರ್ನಾಟಕ ಪ್ರದೇಶದ ಮೀಸಲಾತಿ ಬಗ್ಗೆ**

1] ಹೈದ್ರಾಬಾದ-ಕರ್ನಾಟಕ ಪ್ರದೇಶಕ್ಕೆ ಒಳಪಡುವ ಕೊಪ್ಪಳ, ಬಳ್ಳಾರಿ, ರಾಯಚೂರು, ಯಾದಗಿರಿ, ಕಲಬುರಗಿ ಮತ್ತು ಬೀದರ ಜಿಲ್ಲೆಗಳ ಅಭ್ಯರ್ಥಿಗಳು ಹೈದ್ರಾಬಾದ-ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಇಚ್ಛಿಸಿದ್ದಲ್ಲಿ, ಸಂವಿಧಾನದ ಅನುಚ್ಛೇದ 371(ಜೆ) ಅಡಿಯಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಕಂದಾಯ ಉಪ ವಿಭಾಗದ ಉಪವಿಭಾಗಾಧಿಕಾರಿಗಳು ನೀಡಿರುವ ಅರ್ಹತಾ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ 01/08/2015ರ ಒಳಗಾಗಿ ಪಡೆದಿರತಕ್ಕದ್ದು.

2] ಅಭ್ಯರ್ಥಿಗಳು ಅರ್ಜಿ ಸಲ್ಲಿಸುವಾಗ ಹೈದ್ರಾಬಾದ-ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗೆ ಅಥವಾ ಹೈದ್ರಾಬಾದ-ಕರ್ನಾಟಕ ಪ್ರದೇಶ ಹೊರತುಪಡಿಸಿ ಇತರೆ ಪ್ರದೇಶದವರಿಗೆ ಮೀಸಲಿರಿಸಿದ ಹುದ್ದೆಗೆ ಅರ್ಜಿ ಸಲ್ಲಿಸಿದ ಬಗ್ಗೆ ಕಡ್ಡಾಯವಾಗಿ ನಮೂದಿಸತಕ್ಕದ್ದು.

3] ಹೈದ್ರಾಬಾದ-ಕರ್ನಾಟಕ ಪ್ರದೇಶದವರಲ್ಲದ ಅಭ್ಯರ್ಥಿಗಳು ಹೈದ್ರಾಬಾದ-ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.

4] ಹೈದ್ರಾಬಾದ-ಕರ್ನಾಟಕ ಪ್ರದೇಶಕ್ಕೆ ಒಳಪಡುವ ಅಭ್ಯರ್ಥಿಗಳು ಹೈದ್ರಾಬಾದ-ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗಳಿಗೆ ಅರ್ಜಿ ಸಲ್ಲಿಸದೇ ಹೈದ್ರಾಬಾದ-ಕರ್ನಾಟಕ ಪ್ರದೇಶದವರಿಗೆ ಹೊರತುಪಡಿಸಿ ಬೇರೆ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗೆ ಅರ್ಜಿ ಸಲ್ಲಿಸಿ ತದನಂತರ ಹೈದ್ರಾಬಾದ-ಕರ್ನಾಟಕ ಪ್ರದೇಶಕ್ಕೆ ಮೀಸಲಾತಿ ಕೋರಿದ್ದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

5] ಹೈದ್ರಾಬಾದ-ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗಳ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಅರ್ಹತಾ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿ, [ಅಧ್ಯಕ್ಷರು, ಹೈದ್ರಾಬಾದ ಕರ್ನಾಟಕ ಅರ್ಹತಾ ಪ್ರಮಾಣ ಪತ್ರ ಪರಿಶೀಲನಾ ಸಮಿತಿ] ರವರಿಂದ ಸಿಂಧುತ್ವ ಪ್ರಮಾಣಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

**9) <u>ಜಾತಿ ಮೀಸಲಾತಿ ಪ್ರಮಾಣ ಪತ್ರಗಳು:</u>**

1) **ಜಾತಿ ಮೀಸಲಾತಿ ಕೋರಬಯಸುವ:**

1) ಪಜಾ/ಪಪಂ ಅಭ್ಯರ್ಥಿಗಳು ನಮೂನೆ ಡಿ ರಲ್ಲಿ

2) ಪ್ರವರ್ಗ -1 ರ ಅಭ್ಯರ್ಥಿಗಳು ನಮೂನೆ ಇ ರಲ್ಲಿ

3) ಪ್ರವರ್ಗ-2ಎ, 2ಬಿ,3ಎ,3ಬಿ ಅಭ್ಯರ್ಥಿಗಳು ನಮೂನೆ ಎಫ್ ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

ಮೇಲ್ಕಂಡ ಪ್ರಮಾಣ ಪತ್ರಗಳನ್ನು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ **01/08/2015** ರ ಒಳಗೆ ಪಡೆದುಕೊಂಡಿರಬೇಕು.

4] ಜಾತಿ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿ ( ಅಧ್ಯಕ್ಷರು, ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

**10) ಗ್ರಾಮೀಣ ಅಭ್ಯರ್ಥಿ:**

1) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು.

2) ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ, ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ 2ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟು ಕೊಂಡಿರತಕ್ಕದ್ದು.

3) ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ 2ರ ಬಗ್ಗೆ ಪ್ರಮಾಣ ಪತ್ರದ ಜೊತೆಗೆ ನಮೂನೆ 1 ರಲ್ಲಿ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ತಹಶೀಲ್ದಾರರಿಂದ ಪಡೆದಿಟ್ಟು ಕೊಂಡಿರತಕ್ಕದ್ದು **(ಅನುಬಂಧ–4 ನಮೂನೆ 1 &2)**

**ಸೂಚನೆ:** ಗ್ರಾಮೀಣ ಮೀಸಲಾತಿಗೆ ಸಂಬಂಧಿಸಿದಂತೆ ನಮೂನೆ 2 ರಲ್ಲಿಯ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ತಾವು ವ್ಯಾಸಂಗ ಮಾಡಿದ ಶಾಲೆಯ ಮುಖ್ಯೋಪಾದ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು.

**11) ಅಂಗವಿಕಲರ ಮೀಸಲಾತಿ ಬಗ್ಗೆ:**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 9 (1–ಎ) ರ ಅನ್ವಯ ರಾಜ್ಯ ಸಿವಿಲ್ ಸೇವೆಯಲ್ಲಿನ ಗ್ರೂಪ್ 'ಡಿ' ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಶೇಕಡ 5ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ/128/ಸೇನೆನಿ/2006 ದಿನಾಂಕ 01.08.2009 ರಂತೆ ಮೀಸಲಾತಿ ನೀಡಲಾಗುವುದು. ಸರ್ಕಾರದ ಅಧಿಸೂಚನೆ ನಂ. DPAR.52.SRR 99 ದಿನಾಂಕ 29.11.2002 ರೀತ್ಯಾ "ಡಿ" ದರ್ಜೆ ಹುದ್ದೆಗಳಲ್ಲಿ ಅಂಗವಿಕಲರ ಮೀಸಲಾತಿಯನ್ನು ಈ ಕೆಳಕಂಡ ವರ್ಗಗಳಿಗೆ ಮಾತ್ರ ಕಲ್ಪಿಸಲಾಗಿದೆ.

**1)** ಕುಷ್ಠ ರೋಗದಿಂದ ಗುಣಮುಖರಾದವರು ( leprosy cured)

**2)** ಶ್ರವಣ ದೋಷವುಳ್ಳವರು (Hearing Impaired)

**3)** ಮಾನಸಿಕ ಅಸ್ವಸ್ಥತೆ (Mentally ill)

**4)** ದೈಹಿಕ ಅಂಗವಿಕಲತೆಯುಳ್ಳ (Locomotor Disability)

**5)** Low Vision

**6)** Mentally Retarded

ಈ ಮೇಲಿನ ಅಂಗವಿಕಲರು ಹೊರತುಪಡಿಸಿ ಇತರೆ ದೈಹಿಕ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು 'ಡಿ' ದರ್ಜೆ ಹುದ್ದೆಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ.128.ಸೇನೆನಿ.2005 ದಿನಾಂಕ 19.11.2005 ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವನ್ನು ಪಡೆದು ಕೊಂಡಿರತಕ್ಕದ್ದು. ಬೇರೆ ಯಾವುದೇ ನಮೂನೆಗಳಲ್ಲಿ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲು ಬರುವುದಿಲ್ಲ.

**ಸೂಚನೆ:** ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ:01/08/2015 ರೊಳಗೆ ಅರ್ಹತೆಯನ್ನು ಪಡೆದಿರಬೇಕು. ತಾತ್ಕಾಲಿಕ ಪರಿಶೀಲನಾ ಪಟ್ಟಿಯಲ್ಲಿ ಪ್ರಕಟಗೊಂಡ ಅಭ್ಯರ್ಥಿಗಳು ಮಾತ್ರ ನಿಗದಿತ ದಿನಾಂಕ 04/09/2015 ರಂದು ಪೂರ್ವಾಹ್ನ 10–30 ಗಂಟೆಗೆ ನೇಮಕಾತಿ ಪ್ರಾಧಿಕಾರದ ಎದುರು ( ಕೊಪ್ಪಳ ಜಿಲ್ಲಾಡಳಿತ ಭವನ ಆಡಿಟೋರಿಯಂ ಹಾಲ್) ಮೂಲ ಪ್ರಮಾಣ ಪತ್ರಗಳನ್ನು ತಪ್ಪದೇ ಹಾಜರು ಪಡಿಸತಕ್ಕದ್ದು. ಮೂಲ ಪ್ರಮಾಣ ಪತ್ರಗಳನ್ನು ಹಾಜರ್ ಪಡಿಸದಿರುವ ಅಭ್ಯರ್ಥಿಗಳ ಅರ್ಜಿಯನ್ನು ಯಾವುದೇ ಸೂಚನೆ ನೀಡದೇ ತಿರಸ್ಕರಿಸಲಾಗುವುದು.

**12) ಆಯ್ಕೆ ವಿಧಾನ:**

ಕರ್ನಾಟಕ ನಾಗರೀಕ ಸೇವೆಗಳು (ಕೇಡರ್ ಆಂಡ್ ರಿಕ್ರ್ಯೂಟ್‌ಮೆಂಟ್ ಬೈ ಕಾಂಪಿಟೇಟಿವ್ ಎಕ್ಸಾಮಿನೀನೇಷನ್ಸ್ ಆಂಡ್ ಸೆಲೆಕ್ಷನ್ (ಜನರಲ್)) ನಿಯಮಗಳು 2006 ರನ್ವಯ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರದ ಪತ್ರ ಸಂ/ಸರ್ಕಾರದ ಪತ್ರ ಸಂ/ಸಿಆಸುಇ/273/ಸೇನೆನಿ/2015 ದಿನಾಂಕ: 27.06.2015 ರ ನಿರ್ದೇಶನದಂತೆ ಅಭ್ಯರ್ಥಿಯು 10ನೇ ತರಗತಿ (ಎಸ್.ಎಸ್.ಎಲ್.ಸಿ) ಪರೀಕ್ಷೆಯಲ್ಲಿ ಪಡೆದ ಅಂಕಗಳ (on merit) ಆಧಾರದ ಮೇಲೆ ಆಯಾ ಮೀಸಲಾತಿ ಪ್ರವರ್ಗಕ್ಕೆ ಸಂಬಂಧಿಸಿದಂತೆ ಆಯ್ಕೆ ಮಾಡಲಾಗುವುದು. ನಿಯಮಾವಳಿಯಂತೆ ತಾತ್ಕಾಲಿಕ ಪರಿಶೀಲನಾ ಪಟ್ಟಿಯನ್ನು ದಿನಾಂಕ:– **17/08/2015** ರಂದು ಪ್ರಕಟಿಸಲಾಗುವುದು.

**13) ಪ್ರಮುಖ ಸೂಚನೆಗಳು:**

ಈ ಕೆಳಕಂಡ ಮೂಲ ಪ್ರಮಾಣ ಪತ್ರಗಳನ್ನು ನಿಗದಿಪಡಿಸಿದ ದಿನಾಂಕ:– 04/09/2015 ರಂದು ಪರಿಶೀಲನೆಗೆ ಹಾಜರು ಪಡಿಸತಕ್ಕದ್ದು.

- 10ನೇ ತರಗತಿ (ಎಸ್.ಎಸ್.ಎಲ್.ಸಿ) ತೇರ್ಗಡೆಯಾದ ಬಗ್ಗೆ ಮೂಲ ಅಂಕಪಟ್ಟಿ
- ಜನ್ಮ ದಿನಾಂಕದ ಬಗ್ಗೆ ದಾಖಲೆ (ಎಸ್.ಎಸ್.ಎಲ್.ಸಿ/ಟಿ.ಸಿ ಅಥವಾ ಕ್ಯುಮುಲೇಟಿವ್ ರೆಕಾರ್ಡ್)
- ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು (No Objection Certificate) ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ಪಡೆದಿಟ್ಟುಕೊಂಡಿರಬೇಕು.
- ಪರಿಶಿಷ್ಟ ಜಾತಿ– ಪರಿಶಿಷ್ಟ ಪಂಗಡ (ನಮೂನೆ–ಡಿ) ಮತ್ತು ಪ್ರವರ್ಗ–1 (ನಮೂನೆ ಇ) ಹಾಗೂ 2ಎ, 2ಬಿ, 3ಎ, 3ಬಿ (ನಮೂನೆ–ಎಫ್) ಮೀಸಲಾತಿ ಅಭ್ಯರ್ಥಿಗಳು ಕ್ರಮವಾಗಿ ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್ ರವರಿಂದ ಪಡೆದ ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡಿರತಕ್ಕದ್ದು.
- ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ
- ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರ
- ಹೈದ್ರಾಬಾದ–ಕರ್ನಾಟಕ ಪ್ರದೇಶಕ್ಕೆ ಮೀಸಲಿರಿಸಿದ ಹುದ್ದೆಗೆ ಅರ್ಜಿ ಸಲ್ಲಿಸಿದ್ದಲ್ಲಿ ಕಂದಾಯ ಇಲಾಖೆಯ ಉಪವಿಭಾಗಾಧಿಕಾರಿಗಳು ನೀಡುವ ಅರ್ಹತಾ ಪ್ರಮಾಣ ಪತ್ರ

**14) ಸಾಮಾನ್ಯ ಸೂಚನೆಗಳು:**

- ➢ ನೈತಿಕ ದುರ್ನಡತೆಯಿಂದಾಗಿ/ನೀತಿ ಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ/ ಕೇಂದ್ರ/ಸ್ಥಳೀಯ ಸಂಸ್ಥೆ ಕಚೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿ ಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ/ ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದುಹಾಕಿದ್ದಲ್ಲಿ/ ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗಿರುತ್ತಾರೆ.
- ➢ ಅರ್ಜಿಯಲ್ಲಿ ತಪ್ಪು /ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ ಹಾಗೂ ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗುವುದು.
- ➢ ಅರ್ಜಿಯಲ್ಲಿ ನೀಡುವ ವಿಳಾಸವೇ ಅಂತಿಮವಾಗಿದ್ದು, ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿ ಕೊಡಲಾಗುವುದು. ನಂತರದಲ್ಲಿ ವಿಳಾಸ ಬದಲಾವಣೆ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಪರಿಗಣಿಸಲಾಗುವುದಿಲ್ಲ.
- ➢ ಅಭ್ಯರ್ಥಿಗಳ ಅರ್ಹತೆಯ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ನಿರ್ಧಾರವೇ ಅಂತಿಮವಾಗಿರುತ್ತದೆ
- ➢ ಅಭ್ಯರ್ಥಿಯ ಹೆಸರು ಅಂತಿಮ ಆಯ್ಕೆ ಪಟ್ಟಿಯಲ್ಲಿ ಬಂದಿದೆ ಎಂಬುದರ ಆಧಾರದ ಮೇಲೆ ಅಭ್ಯರ್ಥಿಗೆ ನೇಮಕಾತಿಯ ಯಾವುದೇ ಹಕ್ಕು ದೊರೆಯುವುದಿಲ್ಲ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



- ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ನೌಕರಿ ಸೇವೆಯಲ್ಲಿ ಇರುವ ಅಭ್ಯರ್ಥಿಗಳು ತಮ್ಮ ಇಲಾಖೆಯ ಮುಖ್ಯಸ್ಥರ ನಿರಾಕ್ಷೇಪಣಾ ಪತ್ರವನ್ನು ಹೊಂದಿರತಕ್ಕದ್ದು.
- ಅಧಿಸೂಚಿಸಿರುವ ಹುದ್ದೆಗಳನ್ನು ಹೆಚ್ಚು ಮಾಡುವ ಅಥವಾ ಕಡಿಮೆ ಮಾಡುವ ಹಕ್ಕು ನೇಮಕಾತಿ ಪ್ರಾಧಿಕಾರಕ್ಕೆ ಇರುತ್ತದೆ.
- ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ದಿನಾಂಕವು ಸಾರ್ವಜನಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ದಿನವನ್ನು ಅರ್ಜಿ ಸ್ವೀಕರಿಸಲು ಕೊನೆ ದಿನಾಂಕವಾಗಿರುತ್ತದೆ.
- ಅರ್ಜಿಗಳು ದಿನಾಂಕ: 04/07/2015 ರಿಂದ ಜಿಲ್ಲಾಧಿಕಾರಿಗಳ ಕಾರ್ಯಾಲಯ ಕೊಪ್ಪಳದಲ್ಲಿ ಲಭ್ಯವಿರುತ್ತದೆ. ಹಾಗೂ ದಿನಾಂಕ: 01/08/2015 ರ ಸಂಜೆ 5–30 ರವರೆಗೆ ಮಾತ್ರ ಲಭ್ಯವಿರುತ್ತದೆ. ಅರ್ಜಿಗಳನ್ನು ನೇರವಾಗಿ ಜಿಲ್ಲಾಧಿಕಾರಿಗಳ ಕಾರ್ಯಾಲಯಕ್ಕೆ ಮಾತ್ರ ಸಲ್ಲಿಸತಕ್ಕದ್ದಾಗಿದೆ. ಅರ್ಜಿಗಳನ್ನು ಖುದ್ದಾಗಿ ಅಥವಾ ನೋಂದಾಯಿತ ಅಂಚೆ ಮೂಲಕ ಸಲ್ಲಿಸಲು ಅವಕಾಶ ಕೂಡಾ ಇರುತ್ತದೆ. ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ ಮುಗಿದ ನಂತರ ಸ್ವೀಕೃತವಾಗುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
- 10ನೇ ತರಗತಿ (ಎಸ್.ಎಸ್.ಎಲ್.ಸಿ) ವಿದ್ಯಾರ್ಹತೆಯಲ್ಲಿ ಗಳಿಸಿದ ಅಂಕಗಳ ಮೆರಿಟ್ ಆಧಾರದಲ್ಲಿ ಮೀಸಲಾಗನುಗುಣವಾಗಿ ಪರಿಶೀಲನಾ ಪಟ್ಟಿಯನ್ನು 17/08/2015 ರಂದು ಪ್ರಕಟಿಸಲಾಗುವುದು. ಪರಿಶೀಲನಾ ಪಟ್ಟಿಯಲ್ಲಿನ ಅಭ್ಯರ್ಥಿಗಳು ನಿಗದಿತ ದಿನಾಂಕದಂದು (04/09/2015) ಮೂಲ ದಾಖಲೆಗಳೊಂದಿಗೆ ಪರಿಶೀಲನೆಗಾಗಿ ಹಾಜರಾಗಬೇಕಾಗಿರುತ್ತದೆ.
- ನಿಗದಿತ ದಿನಾಂಕದಂದು ದಾಖಲಾತಿಗಳ ಪರಿಶೀಲನೆಗೆ ಹಾಜರಾಗದೇ ಇರುವ ಅಭ್ಯರ್ಥಿಗಳು ಅನರ್ಹಗೊಳ್ಳುತ್ತಾರೆ ಹಾಗೂ ಅವರ ಹೆಸರನ್ನು ನೇಮಕಾತಿ ಪ್ರಕ್ರಿಯೆಯಿಂದ ಕೈಬಿಡಲಾಗುವುದು.
- ಅರ್ಜಿಯಲ್ಲಿ ಕೇಳಿರುವ ಪೂರ್ಣ ಮಾಹಿತಿಯನ್ನು ಭರ್ತಿ ಮಾಡಿಲ್ಲದೇ ಇರುವ ಅಭ್ಯರ್ಥಿಗಳ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೇ ತಿರಸ್ಕರಿಸಲಾಗುವುದು.
- ಹೆಚ್ಚಿನ ವಿವರಗಳಿಗಾಗಿ ಕೊಪ್ಪಳ ಜಿಲ್ಲೆಯ ವೆಬ್‌ಸೈಟ್ www.koppal.nic.in ರಲ್ಲಿನ ಮಾಹಿತಿ ಸೂಚಿಯಲ್ಲಿ ಲಭ್ಯವಿರುತ್ತದೆ ಮತ್ತು ಸ್ಪಷ್ಟೀಕರಣ ಅವಶ್ಯವಿದ್ದಲ್ಲಿ ಸಹಾಯವಾಣಿ ಸಂಖ್ಯೆ 08539–221690ಗೆ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ.

**ಆರ್.ಆರ್.ಜನ್ನು ಭಾ.ಆ.ಸೇ**
ಅಧ್ಯಕ್ಷರು ಹಾಗೂ ಜಿಲ್ಲಾಧಿಕಾರಿಗಳು
ಗ್ರೂಪ್–ಡಿ ನೇಮಕಾತಿ ಸಮಿತಿ ಕೊಪ್ಪಳ ಜಿಲ್ಲೆ, ಕೊಪ್ಪಳ

**PR. 188**
**SC. 200**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59